CPMG / KA / BG-GPO/13/2003-2005



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೩೮ | ಬೆಂಗಳೂರು, ಗುರುವಾರ, ಡಿಸೆಂಬರ್ ೧೮, ೨೦೦೩ (ಮಾರ್ಗಶಿರ ೨೭, ಶಕ ವರ್ಷ ೧೯೨೫) | ಸಂಚಿಕೆ ೫೦ |
|---|---|---|

## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾಗಿ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು.

### ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿರುವ ಯೋಜನೆಗಳ ತ್ವರಿತ ಅನುಷ್ಠಾನದ ಬಗ್ಗೆ.

**ಪ್ರಸ್ತಾವನೆ:**

ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ಈ ಕೆಳಗಿನ ಪ್ರಮುಖ ಯೋಜನೆಗಳನ್ನು ಅನುಷ್ಠಾನಗೊಳಿಸಬೇಕಾಗಿರುತ್ತದೆ.

1. ಇಂಟರ್‌ನ್ಯಾಷನಲ್ ಕನ್ವೆನ್‌ಷನ್ ಸೆಂಟರ್
2. ಬೆಂಗಳೂರು ಇಂಟರ್ ನ್ಯಾಷನಲ್ ಏರ್‌ಪೋರ್ಟ್ ಲಿಮಿಟೆಡ್
3. ಬೆಂಗಳೂರು -ಮೈಸೂರು ಎಕ್ಸ್‌ಪ್ರೆಸ್ ಹೈವೇ
4. ಬಳ್ಳಾರಿ ಪವರ್ ಪ್ರಾಜೆಕ್ಟ್
5. ಬಿಡದಿ ಪವರ್ ಪ್ರಾಜೆಕ್ಟ್
6. ರೈಲ್ವೆ ಪ್ರಾಜೆಕ್ಟ್
7. ಇನ್‌ಫಾಸ್ಟ್ರಕ್ಚರ್ ಕಾರಿಡಾರ್
8. ಡ್ರಾಟ್ ಪ್ರೋಫಿಂಗ್ ಅಗ್ರಿಕಲ್ಚರ್
9. ಇಂಪ್ರೂವಿಂಗ್ ಸ್ಮಾಲ್ ಫಾರಂ ಪ್ರೊಫಿಟೆಬಲಿಟಿ
10. ಟ್ರಸ್ಟ್ ಟು ವೇವಿಂಗ್
11. ಕಾಫಿ ಪ್ಯಾಕೇಜ್

ಮೇಲಿನ ಯೋಜನೆಗಳು ಹಲವಾರು ಇಲಾಖೆಗಳಿಗೆ ಸಂಬಂಧಿಸಿವೆ. ಈ ಎಲ್ಲಾ ಯೋಜನೆಗಳನ್ನು ತ್ವರಿತವಾಗಿ ಮತ್ತು ಪರಿಣಾಮಕಾರಿಯಾಗಿ ಜಾರಿಗೊಳಿಸಲು ಮುಖ್ಯ ಕಾರ್ಯದರ್ಶಿಯವರಿಗೆ ಪ್ರತ್ಯೇಕವಾದ ಒಬ್ಬ ಸೂಕ್ತ ಸಹಾಯಕ ಅಧಿಕಾರಿಯ ಅವಶ್ಯಕತೆ ಇರುತ್ತದೆ. ಈ ಹಿನ್ನೆಲೆಯಲ್ಲಿ ಮುಖ್ಯ ಕಾರ್ಯದರ್ಶಿಯವರ ಕಾರ್ಯಾಲಯದಲ್ಲಿ ಕೆ. ಎ. ಎಸ್. ಆಯ್ಕೆ ಶ್ರೇಣಿಯ ವೃಂದಕ್ಕೆ ಸಮನಾದ ಒಂದು ವಿಶೇಷ ಕರ್ತವ್ಯಾಧಿಕಾರಿ ಹುದ್ದೆಯನ್ನು ಸೃಜಿಸುವ ಬಗ್ಗೆ ಪರಿಶೀಲಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 342 ಸಅಸೇ 2003, ಬೆಂಗಳೂರು, ದಿನಾಂಕ: 21ನೇ ನವೆಂಬರ್, 2003**

ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿರುವ ಹಲವಾರು ಪ್ರಮುಖ ಯೋಜನೆಗಳನ್ನು ಕಾರ್ಯಗತಗೊಳಿಸಲು ಮುಖ್ಯ ಕಾರ್ಯದರ್ಶಿಯವರ ಕಾರ್ಯಾಲಯದಲ್ಲಿ ಕೆ.ಎ.ಎಸ್. ಆಯ್ಕೆ ಶ್ರೇಣಿ ವೃಂದಕ್ಕೆ ಸಮನಾದ ಒಂದು ವಿಶೇಷ ಕರ್ತವ್ಯಾಧಿಕಾರಿ ಹುದ್ದೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಮತ್ತು ಪ್ರಸ್ತುತ ಒಂದು ವರ್ಷದ ಅವಧಿಗೆ ಸೃಜಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಅಮುಕಾ ಹಾಗೂ ಪ್ರ.ಕಾ, ಆ.ಇ 5501 ದಿನಾಂಕ: 18-11-2003ರಲ್ಲಿ ನೀಡಿರುವ ಸಹಮತಿ ಅನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ. ಆರ್. 1488

**ಯು. ಪಿ. ಪ್ರಭು**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

## FOREST, ECOLOGY AND ENVIRONMENT SECRETARIAT

## CORRIGENDUM

**No. FEE 223 FLL 2003, BANGALORE, DATED: 21st NOVEMBER 2003**

**Sub :** Release of 1000 ha. of forest land (additional) to III Naval Base at Karwar, U. K. District in favour of Project Sea Bird.

In the order portion of the Government Order No. FEE 34 FGL 99, dated 08-05-2002 the words and figures "Sy. No. 50 A1A1A1, 26, 27 and 33 etc., of BerdeNellur, Kanchinabailu Village and Sy. No. 41 of Kotebhavi Neggarni Village" shall be read as "Sakalben Village Sy. No. 102 A1A1A1A1A1A1A (84.435 ha), Sy. No. 95 (3.42 ha.) Sy. No. 96 (1.07 ha.) Sy. No. 97A1A1 (110.76 ha.) Gule Village Sy. No. 25 (5.50 ha), Nellur Kanchanabail Village Sy. No. 26 A1A (72.64 ha.) Sy. No. 28A (188.68 ha.) Sy. No. 30A (153.33 ha.) Sy. No. 32 A (1,46 ha.) Sy. No. 33 (127.31 ha.) Sy. No. 34 (0.48 ha.) Sy. No. 29 (0.37 ha.) and Berade Village Sy. No. 51, A1, A1, A1, A1A1A1A1A (250. 545 ha.)"

By Order and in the name of the Governor of Karnataka,

**S. R. VATSALA**

P. R. 1489

Under Secretary to Government,

Forest, Ecology and Environment Department.

## ಕಾನೂನು ಸಚಿವಾಲಯ

**ವಿಷಯ:** ಶ್ರೀ ಎಸ್. ಬಿಕಂಚಂದ್, ವಕೀಲರು, ನಂಜನಗೂಡು, ಮೈಸೂರು ಜಿಲ್ಲೆ ಇವರನ್ನು ನಂಜನಗೂಡು ಕಂದಾಯ ತಾಲ್ಲೂಕು ಕ್ಷೇತ್ರಕ್ಕೆ ಹೆಚ್ಚುವರಿ ನೋಟರಿಯಾಗಿ ನೇಮಕ ಮಾಡುವ ಬಗ್ಗೆ- ಆದೇಶ.

**ಓದಲಾಗಿದೆ:** 1. ದಿನಾಂಕ: 22-5-2003ರ ಸರ್ಕಾರಿ ಆದೇಶ ಸಂಖ್ಯೆ: ಲಾ 29 ಎಲ್‌ಸಿಎಲ್ 2003,

2. ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಮೈಸೂರುರವರ ಪತ್ರ ಸಂಖ್ಯೆ: 7700: 2003, ದಿನಾಂಕ: 16-8-2003.

**ಪ್ರಸ್ತಾವನೆ:**

ಮೇಲೆ ಓದಲಾಗಿರುವ (1) ದಿನಾಂಕ: 22-5-2003 ರ ಸರ್ಕಾರಿ ಆದೇಶದಲ್ಲಿ ಮೈಸೂರು ಜಿಲ್ಲೆಯ ನಂಜನಗೂಡು ಕಂದಾಯ ತಾಲ್ಲೂಕಿಗೆ ಒಂದು ನೋಟರಿ ಹುದ್ದೆಯನ್ನು ಹೆಚ್ಚುವರಿಯಾಗಿ ಮಂಜೂರು ಮಾಡಲಾಗಿದೆ.

ಹೆಚ್ಚುವರಿಯಾಗಿ ಮಂಜೂರು ಮಾಡಲಾಗಿರುವ ನೋಟರಿ ಹುದ್ದೆಗೆ ಮೇಲೆ ಓದಲಾಗಿರುವ (2) ದಿನಾಂಕ: 16-8-03ರ ಪತ್ರದಲ್ಲಿ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಮೈಸೂರು ರವರು ಅರ್ಜಿಯನ್ನು ಆಹ್ವಾನಿಸಿ ಮೆಮೋರಿಯಲ್ಸ್‌ಗಳ ಜೊತೆ ನೇಮಕಾತಿ ಕೋರಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 29 ಎಲ್‌ಸಿಎಲ್ 2003, ಬೆಂಗಳೂರು, ದಿನಾಂಕ: 19ನೇ ನವೆಂಬರ್ 2003**

ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ, 1956 ರ ನೋಟರಿ ನಿಯಮಾವಳಿಗಳ ನಿಯಮ 8 (1) ರಲ್ಲಿ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಸರ್ಕಾರವು 1952 ರ ನೋಟರಿ ಅಧಿನಿಯಮ ಮತ್ತು ಅವುಗಳ ಅಡಿಯಲ್ಲಿ ರಚಿಸಲಾಗಿರುವ ನಿಯಮಗಳ ರೀತ್ಯ ಶ್ರೀ ಎಸ್. ಬಿಕಂಚಂದ್, ವಕೀಲರು, 14ನೇ ಕ್ರಾಸ್ ಎಕ್ಸ್‌ಟೆನ್‌ಷನ್, ಆರ್. ಪಿ. ರಸ್ತೆ, ನಂಜನಗೂಡು, ಮೈಸೂರು ಜಿಲ್ಲೆ. ಇವರನ್ನು ವೃತ್ತಿ ಪ್ರಮಾಣ ಪತ್ರ ನೀಡಲಾದ ದಿನಾಂಕದಿಂದ ಐದು ವರ್ಷಗಳ ಅವಧಿಗೆ ನಂಜನಗೂಡು ಕಂದಾಯ ತಾಲ್ಲೂಕು ಕ್ಷೇತ್ರಕ್ಕೆ ಹೆಚ್ಚುವರಿ ನೋಟರಿಯನ್ನಾಗಿ ನೇಮಿಸಿದೆ.

ಮೇಲೆ ಹೆಸರಿಸಲಾಗಿರುವ ವಕೀಲರು "0070 ಇತರೆ ಆಡಳಿತಾತ್ಮಕ ಸೇವೆಗಳು- 01 ನ್ಯಾಯ ಪರಿಪಾಲನೆ -501 -0 ಇತರೆ ಸ್ವೀಕೃತಿಗಳು -06 ಇತರೆ ಬಾಬುಗಳು" ಈ ಲೆಕ್ಕ ಶೀರ್ಷಿಕೆಗೆ ಸರ್ಕಾರಿ ಖಜಾನೆಯಲ್ಲಿ ನಿಗದಿಪಡಿಸಲಾದ ರೂ. 1000-00 (ರೂ. ಒಂದು ಸಾವಿರಗಳು ಮಾತ್ರ) ಶುಲ್ಕವನ್ನು ಜಮಾ ಮಾಡಿ ಆ ಬಗೆಗಿನ ಚಲಾನ್ ಮತ್ತು ಹುಟ್ಟಿದ ದಿನಾಂಕವನ್ನು ದೃಢೀಕರಿಸಬಲ್ಲ ದಾಖಲೆಯನ್ನು ಹಾಜರುಪಡಿಸಿದ ನಂತರ ಸದರಿಯವರಿಗೆ ವೃತ್ತಿ ಪ್ರಮಾಣ ಪತ್ರ ನೀಡಲಾಗುವುದು.

ವೃತ್ತಿ ಪ್ರಮಾಣ ಪತ್ರ ನೀಡುತ್ತಿದ್ದ ಹಾಗೆ ಶ್ರೀಯುತರ ಹೆಸರನ್ನು 1952 ರ ನೋಟರಿ ಕಾಯ್ದೆಯ ಅಧಿನಿಯಮ 4ನೇ ಪ್ರಕರಣದಡಿಯಲ್ಲಿ ಸರ್ಕಾರ ನಿರ್ವಹಿಸುತ್ತಿರುವ ರಿಜಿಸ್ಟರ್‌ನಲ್ಲಿ ನಮೂದಿಸಲಾಗುವುದು.

ಮೇಲ್ಕಂಡ ಅಂಶಗಳ ಬಗೆಗಿನ ಎಲ್ಲಾ ವೆಚ್ಚವನ್ನು ಶ್ರೀಯುತರೇ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ. ಆರ್. 1490

**ಜಿ. ಹೆಚ್. ನಾಗೇಂದ್ರಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಾನೂನು ಇಲಾಖೆ (ಆಡಳಿತ-2).

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ:** ಡಾ: ಕೆ. ಅಶೋಕ ರೆಡ್ಡಿ, ರೇಷ್ಮೆ ಸಹಾಯಕ ನಿರ್ದೇಶಕರು, ರೇಷ್ಮೆ ಇಲಾಖೆ, ಇವರ ಸೇವೆಯನ್ನು ಕರ್ನಾಟಕ ರಾಜ್ಯ ದೂರಸಂವೇದಿ ಅನ್ವಯಿಕ ಕೇಂದ್ರ, ಬೆಂಗಳೂರು -ಇಲ್ಲಿ ವಿಲೀನಗೊಳಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಅಧಿಸೂಚನೆ ಸಿಐ 118 ಎಸ್ಎಲ್ಎಸ್ 93, ದಿನಾಂಕ: 26-06-1993.
2. ಪತ್ರ ಸಂ: ಕದೂಕೇ/ ಆಡಳಿತ/ 01/ 2002-03, ದಿ: 13-02-2003. ನಿರ್ದೇಶಕರು, ಕರ್ನಾಟಕ ರಾಜ್ಯ ದೂರಸಂವೇದಿ ಅನ್ವಯಿಕ ಕೇಂದ್ರ, ಬೆಂಗಳೂರು.
3. ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ನಿರ್ದೇಶಕರು, ಬೆಂಗಳೂರು. ಇವರ ಪತ್ರ ಸಂಖ್ಯೆ: ಸಿಬ್ಬಂದಿ -1 (3) ನಿಯೋಜನೆ -100 /02-03, ದಿ: 1-04-2003 ಮತ್ತು 11-08-2003.

**ಪ್ರಸ್ತಾವನೆ:**

ಡಾ: ಕೆ. ಅಶೋಕ ರೆಡ್ಡಿ, ರೇಷ್ಮೆ ಸಹಾಯಕ ನಿರ್ದೇಶಕರು, ರೇಷ್ಮೆ ಇಲಾಖೆ, ಇವರು ಈ ಕೇಂದ್ರದಲ್ಲಿ ಪ್ರತಿ ನಿಯೋಜನೆಯ ಮೇಲೆ ದಿನಾಂಕ: 30-6-1993 ರಿಂದ ಕಾರ್ಯ ನಿರ್ವಹಿಸುತ್ತಿದ್ದು ಅವರ ವಿದ್ಯಾರ್ಹತೆ ಮತ್ತು ಅನುಭವ ಇಲ್ಲಿನ ಚಟುವಟಿಕೆಗಳಿಗೆ ಸೂಕ್ತವಾಗಿರುತ್ತದೆ. ವಿವಿಧ ಬೆಳೆ, ಹಿಪ್ಪು ನೇರಳೆ ವಿಸ್ತೀರ್ಣ ಮತ್ತು ಉತ್ಪನ್ನಗಳ ಅಂದಾಜು ಮಾಡುವಿಕೆ ಯೋಜನೆಯಲ್ಲಿ ಆ ಅಧಿಕಾರಿ ಸಕ್ರಿಯವಾಗಿ ಪಾಲ್ಗೊಳ್ಳುತ್ತಿರುವುದರಿಂದ ಅವರ ಸೇವೆಯನ್ನು ಈ ಕೇಂದ್ರದಲ್ಲಿ ವಿಲೀನಗೊಳಿಸಲು ನಿರ್ದೇಶಕರು, ಕರ್ನಾಟಕ ರಾಜ್ಯ ದೂರ ಸಂವೇದಿ ಅನ್ವಯಿಕ ಕೇಂದ್ರ, ಬೆಂಗಳೂರು, ಇವರು ಮೇಲೆ ಓದಲಾದ (2)ರ ಪತ್ರದಲ್ಲಿ ಕೋರಿರುತ್ತಾರೆ.

ಡಾ: ಕೆ. ಅಶೋಕ ರೆಡ್ಡಿ, ರೇಷ್ಮೆ ಸಹಾಯಕ ನಿರ್ದೇಶಕರು, ಇವರ ಸೇವೆಯನ್ನು ಕರ್ನಾಟಕ ರಾಜ್ಯ ದೂರ ಸಂವೇದಿ ಅನ್ವಯಿಕ ಕೇಂದ್ರ, ಬೆಂಗಳೂರು, ಇಲ್ಲಿ ವಿಲೀನಗೊಳ್ಳಲು ಯಾವುದೇ ಅಭ್ಯಂತರವಿಲ್ಲ. ಅದಲ್ಲದೆ ಇವರ ವಿರುದ್ಧ ಯಾವುದೇ ಇಲಾಖಾ ವಿಚಾರಣೆ/ ಕ್ರಿಮಿನಲ್ ಮೊಕದ್ದಮೆಗಳಾಗಲಿ ಇರುವುದಿಲ್ಲ ಹಾಗೂ ಇವರಿಂದ ಬೇಬಾಕಿ ಇರುವುದಿಲ್ಲವೆಂದೂ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ನಿರ್ದೇಶಕರು, ರೇಷ್ಮೆ ಇಲಾಖೆ, ಬೆಂಗಳೂರು ಇವರು ಮೇಲೆ ಓದಲಾದ (3)ರ ಪತ್ರದಲ್ಲಿ ತಿಳಿಸಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ವಾಕೈ 163 ರೇಸೇವಿ 2003, ಬೆಂಗಳೂರು, ದಿನಾಂಕ: 24ನೇ ನವೆಂಬರ್ 2003**

ಡಾ: ಕೆ. ಅಶೋಕ ರೆಡ್ಡಿ, ರೇಷ್ಮೆ ಸಹಾಯಕ ನಿರ್ದೇಶಕರು, ರೇಷ್ಮೆ ಇಲಾಖೆ, ಇವರ ಸೇವೆಯನ್ನು ಕರ್ನಾಟಕ ರಾಜ್ಯ ದೂರ ಸಂವೇದಿ ಅನ್ವಯಿಕ ಕೇಂದ್ರ, ಬೆಂಗಳೂರು ಇಲ್ಲಿ ಸಾರ್ವಜನಿಕ ಹಿತದೃಷ್ಟಿಯ ಮೇರೆಗೆ ಸರ್ಕಾರ ಈ ಕೆಳಕಂಡ ಷರತ್ತುಗಳಿಗೊಳಪಟ್ಟು ವಿಲೀನಗೊಳಿಸಲು ಅನುಮತಿ ನೀಡಿದೆ.

1. ಸದರಿ ಅಧಿಕಾರಿಯು ಸರ್ಕಾರದಲ್ಲಿ ಸಲ್ಲಿಸಿದ ಸೇವೆಗೆ ಸಂಬಂಧಿಸಿದಂತೆ ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ/ 70/ ಎಸ್ಆರ್ಎಸ್/ 1977, ದಿನಾಂಕ: 27-10-1977 ಹಾಗೂ ಇದಕ್ಕೆ ಸೇರ್ಪಡೆ ಆದೇಶ ಸಂಖ್ಯೆ: ಎಫ್‌ಡಿ / 39/ ಎಸ್ಆರ್ಎಸ್/ 1989, ದಿನಾಂಕ: 21-06-1989 ರನ್ವಯ ಎಲ್ಲಾ ಷರತ್ತುಗಳನ್ನು ಪೂರೈಸಿರಬೇಕು.
2. ಸದರಿ ಅಧಿಕಾರಿಯ ಸೇವೆಯನ್ನು ಕರ್ನಾಟಕ ರಾಜ್ಯ ದೂರ ಸಂವೇದಿ ಅನ್ವಯಿಕ ಕೇಂದ್ರದಲ್ಲಿ ಅವರ ಮಾತೃ ಇಲಾಖೆಯಲ್ಲಿ ಹೊಂದಿರುವ ಹುದ್ದೆಯ ವೇತನ ಶ್ರೇಣಿ ರೂ. 6,000-11,200ರಲ್ಲಿ ವಿಲೀನಗೊಳಿಸತಕ್ಕದ್ದು ಮತ್ತು ಸದ್ಯದಲ್ಲಿ ಅವರು ಮಾತೃ ಇಲಾಖೆಯಲ್ಲಿ ಪಡೆಯುತ್ತಿದ್ದ ಮೂಲ ವೇತನದ ಸಮಾನ ಹಂತದಲ್ಲಿ ವೇತನವನ್ನು ನಿಗದಿಗೊಳಿಸತಕ್ಕದ್ದು.
3. ಕರ್ನಾಟಕ ರಾಜ್ಯ ದೂರ ಸಂವೇದಿ ಅನ್ವಯಿಕ ಕೇಂದ್ರದ ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ಇವರ ಸೇವೆಯನ್ನು ಖಾಯಂ ಆಗಿ ವಿಲೀನಗೊಳಿಸಲು ಅವಕಾಶವಿಲ್ಲದಿದ್ದಲ್ಲಿ ಈ ರೀತಿ ವಿಲೀನಗೊಳಿಸುವ ಬಗ್ಗೆ ಸೂಕ್ತ ತಿದ್ದುಪಡಿ ತರತಕ್ಕದ್ದು.
4. ಕರ್ನಾಟಕ ರಾಜ್ಯ ದೂರ ಸಂವೇದಿ ಅನ್ವಯಿಕ ಕೇಂದ್ರದಲ್ಲಿ ವಿಲೀನವಾದ ಮೇಲೆ ಈ ನೌಕರ ಲೀನ್ ಇಲಾಖೆಯಲ್ಲಿ ಉಳಿಯುವುದಿಲ್ಲ ಮತ್ತು ಪುನಃ ರೇಷ್ಮೆ ಇಲಾಖೆಗೆ ಮರಳಿ ಬರಲು ಅವಕಾಶವಿಲ್ಲ.

ಮೇಲ್ಕಂಡ ಷರತ್ತುಗಳಿಗೆ ಒಪ್ಪಿ ಆ ಕೇಂದ್ರದಲ್ಲಿ ವಿಲೀನ ಹೊಂದುವುದಾಗಿ ಆ ನೌಕರ ಮೊದಲೇ ಮುಚ್ಚಳಿಕೆ ಬರೆದುಕೊಡತಕ್ಕದ್ದು.

ಈ ಆದೇಶವನ್ನು ಕ್ರಮವಾಗಿ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಟಿಪ್ಪಣಿ ಸಂಖ್ಯೆ: ಸಿಆಸುಇ / 921/ ಸೇನಿ. ಎ/ 2003, ದಿನಾಂಕ: 17-06-2003 ಮತ್ತು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ/ 1457 / ವೆಚ್ಚ -1/ 2003, ದಿನಾಂಕ: 14-10-2003ರಲ್ಲಿ ನೀಡಿರುವ ಸಹಮತಿಗಳ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ. ಆರ್. 1491

**ಮಂಜೇಗೌಡ**

ಸರ್ಕಾರದ ಅಧೀನ ಕಾರ್ಯದರ್ಶಿ, ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ (ರೇಷ್ಮೆ).

## ಇಂಧನ ಸಚಿವಾಲಯ

**ವಿಷಯ:** ಮೆಸರ್ಸ್ ಸೌತ್ ವೆಸ್ಟ್ ಹೈಡ್ರೋ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ 4.5 ಮೆಗಾ ವ್ಯಾಟ್ ಸಾಮರ್ಥ್ಯದ ಕಿರುಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವ ಬಗ್ಗೆ ಆದೇಶ.

**ಓದಲಾಗಿದೆ:**
1. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್ಇಡಿ / 06/ ಅಬಿಲ್ಬಿರು/ 2003/ 903, ದಿನಾಂಕ: 20-06-2003.
2. ದಿನಾಂಕ: 4-07-2003ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ / 06/ ಅಬಿಲ್ಬಿರು / 2003/ 1492/ 23/ 09/ 2003.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆಸರ್ಸ್ ಸೌತ್‌ವೆಸ್ಟ್ ಹೈಡ್ರೋ ಪವರ್ ಪ್ರೈವೇಟ್ ಲಿಮಿಟೆಡ್ ಈ ಕಂಪನಿಗೆ ಹಾಸನ ಜಿಲ್ಲೆಯ ಸಕಲೇಶಪುರ ತಾಲ್ಲೂಕಿನ ಮಾರನಹಳ್ಳಿ ಗ್ರಾಮದ ಬಳಿ ಅಬಿಲ್ಬಿರು ಹಳ್ಳಕ್ಕೆ ಅಡ್ಡಲಾಗಿ 4.5 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಹಂಚಿಕೆ ಸಮಿತಿಯು ಸ್ಥಳ ಪರಿವೀಕ್ಷಣೆಗಾಗಿ ಮುಂದೂಡಿತ್ತು. ಸದರಿ ಸ್ಥಳವನ್ನು ಪರಿವೀಕ್ಷಣೆ ಮಾಡಿ ಅರಣ್ಯ ಹಾಗೂ ಪರಿಸರ ಇಲಾಖೆಗಳಿಂದ ನಿರಾಕ್ಷೇಪಣೆ ಪಡೆಯಬೇಕೆಂಬ ಷರತ್ತಿನೊಂದಿಗೆ ಯೋಜನೆ ಹಂಚಿಕೆ ಮಾಡಬಹುದೆಂದು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೇಲೆ (3) ರಲ್ಲಿ ಓದಲಾದ ತಮ್ಮ ಪತ್ರದಲ್ಲಿ ವರದಿ ನೀಡಿರುತ್ತಾರೆ. ಇದನ್ನು ಕೂಲಂಕುಷವಾಗಿ ಪರಿಶೀಲಿಸಿದ ನಂತರ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಂಇ 148 ಎನ್‌ಸಿಇ 2003, ಬೆಂಗಳೂರು, ದಿನಾಂಕ: 18ನೇ ನವೆಂಬರ್, 2003**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಮೆಸರ್ಸ್ ಸೌತ್‌ವೆಸ್ಟ್ ಹೈಡ್ರೋ ಪವರ್ ಪ್ರೈವೇಟ್ ಲಿಮಿಟೆಡ್, ಈ ಕಂಪನಿಗೆ ಹಾಸನ ಜಿಲ್ಲೆಯ ಸಕಲೇಶಪುರ ತಾಲ್ಲೂಕಿನ ಮಾರನಹಳ್ಳಿ ಗ್ರಾಮದ ಬಳಿ ಅಬಿಲ್ಬಿರು ಹಳ್ಳಕ್ಕೆ ಅಡ್ಡಲಾಗಿ 4.5 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು (ಲ್ಯಾಂಜಿಟ್ಯೂಡ್ 75-41'-27" ಪೂರ್ವ ಮತ್ತು ಲ್ಯಾಟಿಟ್ಯೂಡ್ 12-50'-37" ಉತ್ತರ) ಅರಣ್ಯ ಇಲಾಖೆ ಹಾಗೂ ಪರಿಸರ ಇಲಾಖೆಗಳಿಂದ ನಿರಾಕ್ಷೇಪಣೆ ಪಡೆದುಕೊಳ್ಳಬೇಕೆಂದು ಷರತ್ತನ್ನು ವಿಧಿಸಿ ಈ ಕೆಳಗಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿದೆ:

1. (ಅ) ಹಂಚಿಕೆದಾರರು ಈ ಆದೇಶ ಹೊರಡಿಸಿದ ಮೂರು ತಿಂಗಳ ಒಳಗಾಗಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳತಕ್ಕದ್ದು. ಇಲ್ಲದಿದ್ದಲ್ಲಿ, ಈ ಹಂಚಿಕೆ ತಂತಾನೇ ರದ್ದಾಗುವುದು. ನಂತರ, ಕಂಪನಿಯು ಹಂಚಿಕೆಗೋಸ್ಕರ ಪುನಃ ಹೊಸದಾಗಿ ಅರ್ಜಿ ಸಲ್ಲಿಸತಕ್ಕದ್ದು. ಯಾವ ಕಾರಣಕ್ಕೂ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಸ್ವೀಕರಿಸಿದ ಅರ್ಜಿ ಪರಿಷ್ಕರಣಾ ಶುಲ್ಕವನ್ನು ಹಿಂದಿರುಗಿಸಲಾಗುವುದಿಲ್ಲ.

   ಆ) ಅಂತಹ ಒಡಂಬಡಿಕೆಯನ್ನು ರೂ. 400.00ರ ಛಾಪಾ ಕಾಗದದ ಮೇಲೆ ಮಾಡಿಕೊಂಡು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದವರಿಗೆ ಕಳುಹಿಸಿ ಪ್ರಮಾಣೀಕರಿಸಿ ಸರ್ಕಾರಕ್ಕೆ ಕಳುಹಿಸಿಕೊಡತಕ್ಕದ್ದು.

   ಇ) ಈ ಒಡಂಬಡಿಕೆಯನ್ನು ಮಾಡಿಕೊಳ್ಳುವ ಮೊದಲು ಯೋಜನಾ ಅಭಿವೃದ್ಧಿದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಪರಿಷ್ಕರಿಸಲು ಮೆಗಾವ್ಯಾಟ್ ಒಂದಕ್ಕೆ ರೂ. 25,000.00 ದಂತೆ ರೂ. 1.00 ಲಕ್ಷಕ್ಕೆ ಕಡಿಮೆ ಇಲ್ಲದಂತೆ ಪಾವತಿಸತಕ್ಕದ್ದು.

2. (ಅ) ಯೋಜನಾ ಅಭಿವೃದ್ಧಿದಾರರು ಸಂಬಂಧಪಟ್ಟ ಎಲ್ಲಾ ಇಲಾಖೆಗಳಿಂದಲೂ ಅಂದರೆ ನೀರಾವರಿ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ ಕಂದಾಯ ಇಲಾಖೆ ಮತ್ತು ಕರ್ನಾಟಕ ವಿದ್ಯುತ್ ನಿಗಮ ನಿಯಮಿತ (ಕೆ. ಪಿ. ಸಿ. ಎಲ್) ಗಳಿಂದ ಕ್ಲಿಯರೆನ್ಸ್‌ಗಾಗಿ ಅರ್ಜಿ ಸಲ್ಲಿಸತಕ್ಕದ್ದು. ಒಡಂಬಡಿಕೆ ಮಾಡಿಕೊಂಡ ಒಂದು ವರ್ಷದೊಳಗಾಗಿ ವಿವರವಾದ ಯೋಜನಾ ವರದಿಯನ್ನು ಸಲ್ಲಿಸತಕ್ಕದ್ದು.

   (ಆ) ಹಂಚಿಕೆದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಠೇವಣಿ ಇಡುವ ಹಣವನ್ನು ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಆವಿಷ್ಕರಿಸುವುದಕ್ಕೋಸ್ಕರ ಹೊಂದಾಣಿಕೆ ಮಾಡಿಕೊಳ್ಳಲಾಗುವುದು.

3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಯೋಜನಾ ವರದಿಗೆ ತಾಂತ್ರಿಕ ಅನುಮೋದನೆ ಕೊಟ್ಟ ಆರು ತಿಂಗಳ ಒಳಗಾಗಿ ಫೈನಾನ್ಶಿಯಲ್ ಕ್ಲೋಷರ್‌ನ್ನು ಸಾಧಿಸತಕ್ಕದ್ದು.

4. ಫೈನಾನ್ಶಿಯಲ್ ಕ್ಲೋಝರ್‌ನ್ನು (Financial Closure) ಸಾಧಿಸಿದ 24 ತಿಂಗಳ ಒಳಗಾಗಿ ಯೋಜನೆಯನ್ನು ಮುಗಿಸುವ ನಿಟ್ಟಿನಲ್ಲಿ ಹಂಚಿಕೆದಾರರು ಕಾರ್ಯಪ್ರವೃತ್ತರಾಗತಕ್ಕದ್ದು.

5. ಮೇಲೆ ತಿಳಿಸಿದ 2, 3 ಮತ್ತು 4 ಅಂಶಗಳ ಯೋಜನಾ ಅನುಷ್ಠಾನ ಮಾಡಲು ಸಫಲವಾಗದಿದ್ದಲ್ಲಿ ಈ ಹಂಚಿಕೆಯು ತಂತಾನೇ ಯಾವ ಮುನ್ಸೂಚನೆಯನ್ನೂ ನೀಡದೆ ರದ್ದಾಗುವುದೆಂದು ತಿಳಿಯತಕ್ಕದ್ದು.

6. ಯೋಜನಾ ಅಭಿವೃದ್ಧಿದಾರರು ವಿದ್ಯುತ್ತನ್ನು ಮೂರನೆಯವರಿಗೆ ಮಾರಾಟ ಮಾಡುವ ಸಂದರ್ಭದಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ವೀಲಿಂಗ್ ಅಂಡ್ ಬ್ಯಾಂಕಿಂಗ್ ಒಡಂಬಡಿಕೆ ಮಾಡಿಕೊಳ್ಳಲು ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವಿದ್ಯುತ್ತನ್ನು ಮಾರಾಟ ಮಾಡುವ ಸಂದರ್ಭದಲ್ಲಿ ವಿದ್ಯುತ್ ಖರೀದಿ ಒಡಂಬಡಿಕೆ (ಪಿಪಿಎ) ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.

7. ಈ ವಿಷಯದಲ್ಲಿ ಹಂಚಿಕೆದಾರರು ರಾಜ್ಯ ಮತ್ತು ಜಿಲ್ಲಾ ಮಟ್ಟಕ್ಕೆ ಸಂಬಂಧಿಸಿದ ಅಧಿಕಾರಿಗಳ ಸಹಾಯ/ ಸಹಕಾರವನ್ನು ಪಡೆದು ನಿಗದಿತ ಅವಧಿಯೊಳಗೆ ಯೋಜನಾ ಅನುಷ್ಠಾನ ಪೂರ್ಣಗೊಳಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ. ಆರ್. 1492

**ಕೆ. ಎಲ್. ಜಯರಾಂ**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

## ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವಾಲಯ

## ಅಧಿಸೂಚನೆ ಸಂಖ್ಯೆ: ಪಸಂಮೀ 205 ಪಸಸೆ 2003, ಬೆಂಗಳೂರು, ದಿನಾಂಕ: 21ನೇ ನವೆಂಬರ್ 2003

ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆಯಲ್ಲಿ ಪಶುವೈದ್ಯಾಧಿಕಾರಿಗಳ ಬ್ಯಾಕ್‌ಲಾಗ್ ಹುದ್ದೆಗಳನ್ನು ಕರ್ನಾಟಕ ರಾಜ್ಯ ನಾಗರೀಕ ಸೇವೆಗಳು (ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಕ್ಕೆ ಸೇರಿದ ವ್ಯಕ್ತಿಗಳಿಗೆ ಮೀಸಲಿರಿಸಿದ ತುಂಬದೆ ಇರುವ ಸ್ಥಾನಗಳು) (ವಿಶೇಷ ನೇಮಕಾತಿ) ನಿಯಮಗಳು 2001ರಡಿಯಲ್ಲಿ ಭರ್ತಿ ಮಾಡಲು ಕರ್ನಾಟಕ ಲೋಕಸೇವಾ ಆಯೋಗದಿಂದ ಆಯ್ಕೆಗೊಂಡ ಡಾ: ತ್ರಿಮೂರ್ತಿ ನಾಯಕ್ ಇವರನ್ನು ಪಶುವೈದ್ಯಾಧಿಕಾರಿ ಹುದ್ದೆಯ ವೇತನ ಶ್ರೇಣಿ ರೂ. 6300-150-7200-200-8800-260-10800-320-11840 ರಲ್ಲಿ 2 ವರ್ಷಗಳ ಖಾಯಂಪೂರ್ವ ಸೇವಾ ಅವಧಿಯ ಮೇರೆಗೆ ಕೆಳಕಾಣಿಸಿದ ಷರತ್ತು ಮತ್ತು ನಿಬಂಧನೆಗೊಳಪಟ್ಟು ನೇಮಕಾತಿ ಮಾಡಲಾಗಿದೆ.

**ಷರತ್ತು:**

1. ಅಭ್ಯರ್ಥಿಯ ನೇಮಕಾತಿಯು ತಾತ್ಕಾಲಿಕವಾಗಿದ್ದು, ಅವರ ನೇಮಕಾತಿ ಮತ್ತು ಸೇವಾ ಷರತ್ತುಗಳು ಆಗಿಂದಾಗ್ಗೆ ಜಾರಿಯಲ್ಲಿರುವ ನಿಯಮಾವಳಿಯ ಅಥವಾ ಆದೇಶಗಳ ಅಧೀನಕ್ಕೆ ಒಳಪಟ್ಟಿರುತ್ತವೆ;
2. ಅವರು 1977ರ ಕರ್ನಾಟಕ ನಾಗರೀಕ ಸೇವಾ (ಪರೀಕ್ಷಾರ್ಥ) ನಿಯಮಗಳಿಗೆ ಬದ್ಧರಾಗಿರುತ್ತಾರೆ;
3. ಪರೀಕ್ಷಾರ್ಥ ಅವಧಿಯಲ್ಲಿ ಅಭ್ಯರ್ಥಿಯು 1974ರ ಕರ್ನಾಟಕ ನಾಗರೀಕ ಸೇವಾ (ಸೇವಾ ಮತ್ತು ಕನ್ನಡ ಭಾಷಾ ಪರೀಕ್ಷೆ) ನಿಯಮಾವಳಿಯಲ್ಲಿ ಮೇಲ್ಕಂಡ ಹುದ್ದೆಗೆ ನಿಗದಿಪಡಿಸಿರುವ ಕನ್ನಡ ಭಾಷಾ ಮತ್ತು ಇಲಾಖಾ ಪರೀಕ್ಷೆಯಲ್ಲಿ ಉತ್ತೀರ್ಣರಾಗತಕ್ಕದ್ದು;
4. ಅಭ್ಯರ್ಥಿಯ ಜೇಷ್ಠತೆಯನ್ನು ಕರ್ನಾಟಕ ಲೋಕಸೇವಾ ಆಯೋಗದ ಆಯ್ಕೆ ಪಟ್ಟಿಯಲ್ಲಿ ರೂಪಿಸಿರುವ ಕ್ರಮಸಂಖ್ಯೆಯಂತೆ ಹಾಗೂ ಸರ್ಕಾರವು ಆಗ್ಗಿಂದಾಗ್ಗೆ ಹೊರಡಿಸುವ ಆದೇಶಗಳ ಅನ್ವಯ ನಿರ್ಧರಿಸಲಾಗುವುದು;
5. ಅಭ್ಯರ್ಥಿಯು ಈ ಅಧಿಸೂಚನೆಯನ್ನು ಸ್ವೀಕರಿಸಿದ ದಿನಾಂಕದಿಂದ 15 ದಿನಗಳ ಅವಧಿಯಲ್ಲಿ ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆಯ ನಿರ್ದೇಶಕರ ಸಮ್ಮುಖದಲ್ಲಿ ಕರ್ತವ್ಯದ ಮೇಲೆ ಹಾಜರಾಗತಕ್ಕದ್ದು. ಹಾಜರಾಗದಿದ್ದಲ್ಲಿ ನೇಮಕಾತಿಯು ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977ರ ನಿಯಮ 18 (3) ರನ್ವಯ ಯಾವುದೇ ಸೂಚನೆಯಿಲ್ಲದೆ ರದ್ದಾಗುವುದು;
6. ಅಭ್ಯರ್ಥಿಯು ಪರೀಕ್ಷಾರ್ಥ ಅವಧಿಯಲ್ಲಿ ನಿಯೋಜಿಸುವ ತರಬೇತಿಯನ್ನು ಯಶಸ್ವಿಯಾಗಿ ಪೂರೈಸತಕ್ಕದ್ದು;
7. ಅಭ್ಯರ್ಥಿಯು ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆಯ ನಿರ್ದೇಶಕರ ಸಮ್ಮುಖದಲ್ಲಿ ರೂ. 10-00 ರ ಮೌಲ್ಯದ ಛಾಪಾ ಕಾಗದದಲ್ಲಿ ಈ ಕೆಳಕಂಡ ವಚನ ಬದ್ಧವನ್ನು ಕರ್ತವ್ಯಕ್ಕೆ ಹಾಜರಾಗುವ ಸಮಯದಲ್ಲಿ ಬರೆದುಕೊಡತಕ್ಕದ್ದು.

**ನಮೂನೆ**

**ವಚನಬದ್ಧ**

ಶ್ರೀಮತಿ: ಶ್ರೀ ................................ ಇವರ ಪುತ್ರ: ಪುತ್ರಿಯಾದ ಡಾ: ..................................... (ಪೂರ್ಣ ವಿಳಾಸದೊಂದಿಗೆ) ನಾನು ಈ ಮೂಲಕ ವಚನ ಬದ್ಧವನ್ನು ಕೊಡುತ್ತಿದ್ದು, ಒಂದು ವೇಳೆ ವೈದ್ಯಕೀಯ ಮಂಡಳಿಯಿಂದ ದೇಹದಾರ್ಢ್ಯತೆಯ ಬಗ್ಗೆ ವಿಚಾರಣೆ ನಂತರ ಪ್ರತಿಕೂಲ ವರದಿ ಬಂದಲ್ಲಿ, ನಾನು ನೇಮಕಾತಿ ಆದೇಶವನ್ನು ಕಳೆದುಕೊಳ್ಳುವೆನು:ಳು ಎಂಬುವುದನ್ನು ಮನಗಂಡು ಪ್ರಮಾಣೀಕರಿಸಿರುತ್ತೇನೆ. ಇದರಲ್ಲಿ ಯಾವುದೇ ಲೋಪಗಳು ಕಂಡು ಬಂದಲ್ಲಿ ಮುನ್ಸೂಚನೆಯಿಲ್ಲದೆ ಸೇವೆಯಿಂದ ತೆಗೆದುಹಾಕಲು ನಾನು ಒಪ್ಪಿರುತ್ತೇನೆ.

ಸ್ಥಳ:

ದಿನಾಂಕ: (ಅಭ್ಯರ್ಥಿಯ ಹೆಸರು)

ಸಾಕ್ಷಿಗಳು : 1)

2)

ಅಭ್ಯರ್ಥಿಯು ನನ್ನೆದುರು ಪ್ರಮಾಣ ಮಾಡಿದ್ದಾರೆ ಮತ್ತು ರುಜುವನ್ನು ನಾನು ಗುರುತಿಸಿರುತ್ತೇನೆ.

ಸ್ಥಳ: (ನಿರ್ದೇಶಕರು

ದಿನಾಂಕ: ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ)

(ಹೆಸರು ಮತ್ತು ಮೊಹರು)

8. ಅಭ್ಯರ್ಥಿಯು ಕರ್ತವ್ಯಕ್ಕೆ ಹಾಜರಾಗುವ ಸಮಯದಲ್ಲಿ ಅವರ ಮೂಲ ಅಂಕಪಟ್ಟಿ, ಪದವಿ ಪ್ರಮಾಣಪತ್ರ, ಜನ್ಮ ದಿನಾಂಕ: ಮೀಸಲಾತಿ ಪ್ರಮಾಣ ಪತ್ರ ಹಾಗೂ ಇತರೆ ಮೂಲ ಪ್ರಮಾಣ ಪತ್ರಗಳನ್ನು ಪರಿಶೋಧನೆಗೆ ಹಾಜರುಪಡಿಸತಕ್ಕದ್ದು. ಅಲ್ಲದೆ ಇಬ್ಬರು ಗೌರವಾನ್ವಿತ ವ್ಯಕ್ತಿಗಳಿಂದ ಪಡೆಯಲಾದ ಗುಣ ಮತ್ತು ನಡತೆ ಪ್ರಮಾಣ ಪತ್ರಗಳನ್ನು ಇತ್ತೀಚಿನ ಭಾವಚಿತ್ರಗಳೊಂದಿಗೆ ಕರ್ತವ್ಯಕ್ಕೆ ಹಾಜರಾಗುವ ಸಂದರ್ಭದಲ್ಲಿ ಹಾಜರುಪಡಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ. ಆರ್. 1493

**ಬಾಣದ ರಂಗಪ್ಪ**

ಪೀಠಾಧಿಕಾರಿ, ಪಶುಸಂಗೋಪನೆ -ಎ,

ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ.

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ

**ವಿಷಯ:** ಮಹಿಳೆಯರ ಮೇಲೆ ನಡೆಯುವ ದೌರ್ಜನ್ಯಗಳ ಬಗ್ಗೆ ಕಾನೂನಿನ ಅರಿವು ಮೂಡಿಸುವ ಕಾರ್ಯಕ್ರಮ ಏರ್ಪಡಿಸುವ ಸಲುವಾಗಿ ಜಿಲ್ಲಾ ಮತ್ತು ತಾಲ್ಲೂಕು ಮಟ್ಟದಲ್ಲಿ ಸಲಹಾ ಸಮಿತಿಗಳನ್ನು ರಚಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಮಮಅ/ 63/ ಮ ಅ ನಿ/ 2000, ದಿ: 23-09-2000.
2. ಪತ್ರ ಸಂಖ್ಯೆ: ಮಮಅಇ/ ವಿಘ್/ 2003-04, ದಿನಾಂಕ: 03-7-2003.
3. ರಿಜಿಸ್ಟ್ರಾರ್ ಜನರಲ್, ಕರ್ನಾಟಕ ಉಚ್ಚ ನ್ಯಾಯಾಲಯ, ಬೆಂಗಳೂರು ಇವರ ಪತ್ರ ಸಂಖ್ಯೆ/ ಆರ್‌ಪಿಎಸ್/ 60/ 2002 (ಎಲ್.ಸಿ.ಎ.-1) ದಿನಾಂಕ: 3-10-2003.

**ಪ್ರಸ್ತಾವನೆ:**

ದಿನಾಂಕ: 04-1-2003 ರಂದು ಕಾರ್ಯದರ್ಶಿಗಳು, ಕಾನೂನು ಇಲಾಖೆಯ ಇವರ ಅಧ್ಯಕ್ಷತೆಯಲ್ಲಿ ನಡೆದ ಉನ್ನತ ಮಟ್ಟದ ಸಮಿತಿ ಸಭೆಯಲ್ಲಿ ಮಹಿಳೆಯರ ಮೇಲೆ ನಡೆಯುವ ದೌರ್ಜನ್ಯಗಳ ಬಗ್ಗೆ ಕಾನೂನಿನ ಅರಿವು ಮೂಡಿಸುವ ಕಾರ್ಯಕ್ರಮ ಏರ್ಪಡಿಸುವ ಸಲುವಾಗಿ, ಜಿಲ್ಲಾ ಹಾಗೂ ತಾಲ್ಲೂಕು ಮಟ್ಟದಲ್ಲಿ ಸ್ವಯಂ ಸೇವಾ ಪ್ರತಿನಿಧಿಯನ್ನೊಳಗೊಂಡ ಸಮಿತಿಯನ್ನು ಕರ್ನಾಟಕ ರಾಜ್ಯ ಕಾನೂನು ಸೇವಾ ಪ್ರಾಧಿಕಾರದೊಂದಿಗೆ ಹಾಗೂ ಕರ್ನಾಟಕ ರಾಜ್ಯ ಮಹಿಳಾ ಆಯೋಗದಿಂದ ಸಮಾಲೋಚನೆ ನಡೆಸಿ ರಚಿಸಲು ತೀರ್ಮಾನಿಸಲಾಗಿದೆ.

ನಿರ್ದೇಶಕರು, ಮಹಿಳಾ ಹಾಗೂ ಮಕ್ಕಳ ಅಭಿವೃದ್ಧಿ ಇಲಾಖೆ ಇವರು ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಪತ್ರದೊಂದಿಗೆ ಈ ಬಗ್ಗೆ ಪ್ರಸ್ತಾವನೆಯನ್ನು ಸಲ್ಲಿಸಿ, ಈಗಾಗಲೇ ಜಿಲ್ಲಾ ಮಟ್ಟದಲ್ಲಿ ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಆದೇಶದಂತೆ ಸಾಂತ್ವನ ಸಮಿತಿ ರಚಿತಗೊಂಡು ಕಾರ್ಯನಿರ್ವಹಿಸುತ್ತಿರುವುದರಿಂದ, ಸದರಿ ಸಮಿತಿಯೇ ಈ ಕಾರ್ಯವನ್ನು ಸಹ ನಿರ್ವಹಿಸಲು ತಿಳಿಸಬಹುದಾಗಿದೆ ಎಂದು ಅಭಿಪ್ರಾಯಪಟ್ಟು, ಪ್ರಸ್ತುತ ತಾಲ್ಲೂಕು ಮಟ್ಟದ ಸಲಹಾ ಸಮಿತಿಯನ್ನು ಮಾತ್ರ ರಚಿಸಬೇಕೆಂದು ಕೋರಿರುತ್ತಾರೆ. ಜಿಲ್ಲಾ ಹಾಗೂ ತಾಲ್ಲೂಕು ಮಟ್ಟದ ಸಮಿತಿಗಳಲ್ಲಿ ಜಿಲ್ಲಾ ಕಾನೂನು ನೆರವು ಸಮಿತಿ/ ಬಾರ್ ಅಸೋಷಿಯೇಷನ್‌ರವರನ್ನು ಸೇರ್ಪಡಿಸಲು ರಿಜಿಸ್ಟ್ರಾರ್ ಜನರಲ್, ಕರ್ನಾಟಕ ಉಚ್ಚ ನ್ಯಾಯಾಲಯ ಬೆಂಗಳೂರು ಇವರ ಅಭಿಪ್ರಾಯವನ್ನು ಕೇಳಲಾಗಿ ಅವರು ಮೇಲೆ ಕ್ರಮಸಂಖ್ಯೆ (3)ರ ಪತ್ರದಲ್ಲಿ ಸದರಿ ಸಮಿತಿಗಳಲ್ಲಿ ಜಿಲ್ಲಾ ಕಾನೂನು ನೆರವು ಸಮಿತಿ ಹಾಗೂ ತಾಲ್ಲೂಕು ಕಾನೂನು ಸೇವಾ ಪ್ರಾಧಿಕಾರದ ಅಧ್ಯಕ್ಷರುಗಳಿಂದ ನಾಮನಿರ್ದೇಶನ ಹೊಂದಿದವರೊಬ್ಬರನ್ನು ಈ ಸಮಿತಿಗಳಿಗೆ ಸದಸ್ಯರೆಂದು ಪರಿಗಣಿಸಬಹುದೆಂದು ತಿಳಿಸಿರುತ್ತಾರೆ.

ಸರ್ಕಾರವು ಈ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲನೆ ಮಾಡಿದ್ದು, ಈಗಾಗಲೇ ಜಿಲ್ಲಾಮಟ್ಟದಲ್ಲಿ ಸಾಂತ್ವಾನ ಸಮಿತಿ ರಚಿತಗೊಂಡು ಕಾರ್ಯ ನಿರ್ವಹಿಸುತ್ತಿರುವುದರಿಂದ ಸದರಿ ಸಮಿತಿಯು ಜಿಲ್ಲಾ ಮಟ್ಟದಲ್ಲಿ ಮಹಿಳೆಯರಿಗಾಗಿ ಕಾನೂನು ಅರಿವು ಮೂಡಿಸುವ ಕಾರ್ಯಕ್ರಮ ಏರ್ಪಡಿಸುವ ಕೆಲಸವನ್ನು ನಿರ್ವಹಿಸುವುದು ಸೂಕ್ತವಾಗುವುದರಿಂದ ನಿರ್ದೇಶಕರ ಅಭಿಪ್ರಾಯದಂತೆ ಜಿಲ್ಲಾ ಮಟ್ಟದ ಸಾಂತ್ವಾನ ಸಮಿತಿಗೆ ಈ ಕಾರ್ಯವಹಿಸಲು ತೀರ್ಮಾನಿಸಿ ತಾಲ್ಲೂಕು ಮಟ್ಟದಲ್ಲಿ ಮಾತ್ರ ತಹಶೀಲ್ದಾರ್ ರವರ ಅಧ್ಯಕ್ಷತೆಯಲ್ಲಿ ಸಲಹಾ ಸಮಿತಿಯನ್ನು ರಚಿಸಲು ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಮಮಇ/ 29/ ಮಅನಿ/ 2003, ಬೆಂಗಳೂರು, ದಿನಾಂಕ: 04ನೇ ನವೆಂಬರ್ 2003**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಮಹಿಳೆಯರ ಮೇಲೆ ನಡೆಯುವ ದೌರ್ಜನ್ಯಗಳ ಬಗ್ಗೆ ಕಾನೂನಿನ ಅರಿವು ಮೂಡಿಸಲು ಕಾರ್ಯಕ್ರಮ ಏರ್ಪಡಿಸುವ ಸಲುವಾಗಿ ತಾಲ್ಲೂಕು ಮಟ್ಟದಲ್ಲಿ ಸಲಹಾ ಸಮಿತಿಯನ್ನು ಈ ಕೆಳಕಂಡ ಸದಸ್ಯರೊಂದಿಗೆ ರಚಿಸಲಾಗಿದೆ.

**ತಾಲ್ಲೂಕು ಮಟ್ಟದ ಸಮಿತಿ:**

| | | |
|---|---|---|
| 1. | ತಹಶೀಲ್ದಾರರು | ಅಧ್ಯಕ್ಷರು |
| 2. | ತಾಲ್ಲೂಕು ಕಾನೂನು ಸೇವಾ ಪ್ರಾಧಿಕಾರದ ಪ್ರತಿನಿಧಿಗಳು | ಸದಸ್ಯರು |
| 3. | ಕ್ಷೇತ್ರ ಶಿಕ್ಷಣಾಧಿಕಾರಿಗಳು | ಸದಸ್ಯರು |
| 4. | ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿಗಳು | ಸದಸ್ಯರು |
| 5. | ಆರಕ್ಷಕ ವೃತ್ತ ನಿರೀಕ್ಷಕರು | ಸದಸ್ಯರು |
| 6. | ವಾರ್ತಾ ಮತ್ತು ಪ್ರಚಾರ ಇಲಾಖೆಯ ಅಧಿಕಾರಿಗಳು | ಸದಸ್ಯರು |
| 7. | ಸ್ವಯಂ ಸೇವಾ ಸಂಸ್ಥೆಯ ಪ್ರತಿನಿಧಿ | ಅಧಿಕಾರೇತರ ಸದಸ್ಯರು |
| 8. | ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ | ಸದಸ್ಯ ಕಾರ್ಯದರ್ಶಿಗಳು |

**ಸಮಿತಿಯ ಕಾರ್ಯಗಳು:**

1. ಈ ಸಮಿತಿಯು ಎರಡು ತಿಂಗಳಿಗೊಮ್ಮೆ ಸಭೆ ಸೇರಿ, ತಾಲ್ಲೂಕು ಮಟ್ಟದಲ್ಲಿ ಮಹಿಳೆಯರಿಗಾಗಿ ಕಾನೂನಿನ ಅರಿವು ಮೂಡಿಸುವ ಕಾರ್ಯಾಗಾರಗಳನ್ನು ಏರ್ಪಡಿಸುವ ಬಗ್ಗೆ ಕಾರ್ಯಕ್ರಮ ರೂಪಿಸಲು ಕ್ರಮ ತೆಗೆದುಕೊಳ್ಳಬೇಕು;
2. ಈ ಸಮಿತಿಗಳು ಸಭೆ ನಡೆಸಿದ ಬಗ್ಗೆ ಹಾಗೂ ಕಾರ್ಯಾಗಾರವನ್ನು ನಡೆಸಿದ ಬಗ್ಗೆ ವರದಿಯನ್ನು ನಿರ್ದೇಶಕರು ಮಹಿಳಾ ಹಾಗೂ ಮಕ್ಕಳ ಅಭಿವೃದ್ಧಿ ಇಲಾಖೆ ಹಾಗೂ ಕಾರ್ಯದರ್ಶಿ, ಕರ್ನಾಟಕ ರಾಜ್ಯ ಮಹಿಳಾ ಆಯೋಗ ಇವರಿಗೆ ಕಳುಹಿಸಬೇಕು.

ಈ ಮೇಲ್ಕಾಣಿಸಿದ ಕಾರ್ಯಗಳನ್ನು ಜಿಲ್ಲಾ ಮಟ್ಟದಲ್ಲಿ ಸಾಂತ್ವಾನ ಸಮಿತಿಗೆ ವಹಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ. ಆರ್. 1494

**ಪ್ರ. ದ. ಸಿದ್ಧಾಂತಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

## ಕಂದಾಯ ಸಚಿವಾಲಯ

**ವಿಷಯ:** ಕಂದಾಯ ಇಲಾಖೆಯ ಬರ ಉಸ್ತುವಾರಿ ಕೋಶವನ್ನು ಮುಂದುವರಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 382 ಟಿಎನ್‌ಆರ್ 2002, ದಿನಾಂಕ: 3-1-2003.

2. ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 369 ಟಿಎನ್‌ಆರ್ 2003, ದಿನಾಂಕ: 24-6-2003.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಆದೇಶದಲ್ಲಿ ಕಂದಾಯ ಇಲಾಖೆಯ ಪ್ರಧಾನ ಕಾರ್ಯದರ್ಶಿಯವರ ನೇತೃತ್ವದಲ್ಲಿ ಪ್ರತಿಯೊಂದು ಕಂದಾಯ ವಿಭಾಗದಲ್ಲಿನ ಬರಪರಿಸ್ಥಿತಿಯನ್ನು ಅವಲೋಕಿಸಲು ಬರ ಉಸ್ತುವಾರಿ ಕೋಶವನ್ನು ದಿನಾಂಕ: 1-12-2002 ರಿಂದ 30-6-2003 ರವರೆಗೆ ಸೃಜಿಸಲಾಗಿತ್ತು.

ಮೇಲೆ (2) ರಲ್ಲಿ ಓದಲಾದ ದಿನಾಂಕ: 4-6-2003ರ ಸರ್ಕಾರಿ ಆದೇಶದಲ್ಲಿ ಸದರಿ ಹುದ್ದೆಗಳ ಪೈಕಿ ಒಂದು ಹುದ್ದೆಯನ್ನು ಮಾತ್ರ ಪೂರಕ ಸಿಬ್ಬಂದಿ ಸಹಿತ ದಿನಾಂಕ: 1-7-2003ರಿಂದ 31-12-2003ರವರೆಗೆ ಮುಂದುವರಿಸಲು ಮಂಜೂರಾತಿಯನ್ನು ನೀಡಲಾಗಿತ್ತು.

ರಾಜ್ಯದಲ್ಲಿ ಪ್ರಸ್ತುತ ಇರುವ ಬರಪರಿಸ್ಥಿತಿ ಹಾಗೂ ಪ್ರಕೃತಿ ವಿಕೋಪಕ್ಕೆ ಸಂಬಂಧಿಸಿದ ಕೆಲಸ ಕಾರ್ಯಗಳ ನಿರ್ವಹಣೆಗಾಗಿ ಮಂಜೂರಾದ ಈ ಬರ ಉಸ್ತುವಾರಿ ಕೋಶದ ಹುದ್ದೆಗಳನ್ನು ಮುಂದುವರಿಸುವ ಬಗ್ಗೆ ಪರಿಶೀಲಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆರ್‌ಡಿ 369 ಟಿಎನ್‌ಆರ್ 2003, ಬೆಂಗಳೂರು, ದಿನಾಂಕ: 10ನೇ ನವೆಂಬರ್ 2003**

ಪ್ರಸ್ತಾವನೆಯಲ್ಲಿ ವಿವರಿಸಿದ ಹಿನ್ನೆಲೆಯಲ್ಲಿ ಕಂದಾಯ ಇಲಾಖೆಯ ಪ್ರಧಾನ ಕಾರ್ಯದರ್ಶಿಯವರ ನೇರ ನೇತೃತ್ವದಲ್ಲಿರುವ ಬರ ಉಸ್ತುವಾರಿ ಕೋಶಕ್ಕೆ ಮಂಜೂರಾಗಿರುವ 4 ಹುದ್ದೆಗಳ ಪೈಕಿ ಕೇವಲ ಒಂದು ಹುದ್ದೆಯನ್ನು ಮಾತ್ರ (ವಿಶೇಷಾಧಿಕಾರಿ, ಬರ ಉಸ್ತುವಾರಿ ಕೋಶ) ಪೂರಕ ಸಿಬ್ಬಂದಿ ಸಹಿತ ದಿನಾಂಕ: 1-1-2004 ರಿಂದ 30-6-2004 ರವರೆಗೆ ಅಥವಾ ಮುಂದಿನ ಆದೇಶದವರೆಗೆ ಅವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮುಂದುವರಿಸಲು ಮಂಜೂರಾತಿಯನ್ನು ನೀಡಲಾಗಿದೆ.

ಈ ಆದೇಶವನ್ನು ಇಲಾಖಾ ಕಾರ್ಯದರ್ಶಿಗಳಿಗೆ ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10.7.96ರಲ್ಲಿ ಪ್ರದತ್ತವಾದ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ. ಆರ್. 1495 **ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಪರಿಹಾರ ಮತ್ತು ಸೇವೆಗಳು-2).

## ಆರ್ಥಿಕ ಸಚಿವಾಲಯ

**ವಿಷಯ:** ದಕ್ಷಿಣ ಕನ್ನಡ ಜಿಲ್ಲೆಯ ಮೂಡಬಿದರೆಯಲ್ಲಿ ನಡೆಯಲಿರುವ 71ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನಕ್ಕಾಗಿ, ಜಿಲ್ಲಾ ರಂಗಮಂದಿರ ನಿರ್ಮಾಣಕ್ಕಾಗಿ ಹಾಗೂ ಜಿಲ್ಲಾ ರಾಜ್ಯ ಸರ್ಕಾರಿ ನೌಕರರ ಸಂಘದ ಯೂನಿಯನ್ ಬ್ಲಾಕ್ ಕಟ್ಟಡ ನಿರ್ಮಾಣಕ್ಕಾಗಿ ದಕ್ಷಿಣ ಕನ್ನಡ ಜಿಲ್ಲಾ ರಾಜ್ಯ ಸರ್ಕಾರಿ ನೌಕರರ ಒಂದು ದಿನದ ವೇತನವನ್ನು ವಂತಿಗೆಯಾಗಿ ನೀಡುವ ಕುರಿತು - ಆದೇಶ

**ಓದಲಾಗಿದೆ:** 1. ಜಿಲ್ಲಾಧಿಕಾರಿ, ದಕ್ಷಿಣ ಕನ್ನಡ ಜಿಲ್ಲೆ ಇವರು ಕರ್ನಾಟಕ ರಾಜ್ಯದ ಸರ್ಕಾರಿ ಸಂಘದ ಅಧ್ಯಕ್ಷರಿಗೆ ಬರೆದ ಸಂಖ್ಯೆ: ಕಸಂ೯: ಮಂ: ಜಿ.ರಂ. 2003-04 ದಿನಾಂಕ: 7-8-2003ರ ಪತ್ರ.

2. ಅಧ್ಯಕ್ಷರು, ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘ, ಜಿಲ್ಲಾ ಶಾಖೆ, ದಕ್ಷಿಣ ಕನ್ನಡ ಜಿಲ್ಲೆ ಇವರ ಪತ್ರದ ಸಂಖ್ಯೆ: 61/ ಸಾ. ಸ/ 2003, ದಿನಾಂಕ: 3-9-2003.

3. ಅಧ್ಯಕ್ಷರು, ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘ, ಬೆಂಗಳೂರು, ಇವರು ಸರ್ಕಾರಕ್ಕೆ ಬರೆದ ಪತ್ರ ಸಂಖ್ಯೆ: ಜಿ ಇ ವ 7962: 2003-04, ದಿನಾಂಕ: 13-10-2003.

**ಪ್ರಸ್ತಾವನೆ:**

71ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನವು ಡಿಸೆಂಬರ್ 2003ರಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಮೂಡಬಿದರೆಯಲ್ಲಿ ನಡೆಯಲಿದ್ದು, ಸದರಿ ಸಮ್ಮೇಳನದ ವೆಚ್ಚ ಭರಿಸುವ ಸಲುವಾಗಿ, ಹಾಗೂ ದಕ್ಷಿಣ ಕನ್ನಡ ಜಿಲ್ಲಾ ರಂಗಮಂದಿರ ನಿರ್ಮಾಣ ಮತ್ತು ದಕ್ಷಿಣ ಕನ್ನಡ ಜಿಲ್ಲಾ ಶಾಖೆ ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘದ "ಯೂನಿಯನ್ ಬ್ಲಾಕ್" ಕಟ್ಟಡ ನಿರ್ಮಾಣಕ್ಕಾಗಿ ದಕ್ಷಿಣ ಕನ್ನಡ ಜಿಲ್ಲಾ ರಾಜ್ಯ ಸರ್ಕಾರಿ ನೌಕರರ ಒಂದು ದಿನದ ವೇತನವನ್ನು ವಂತಿಗೆಯಾಗಿ ನೀಡುವ ಕುರಿತು ದಿನಾಂಕ: 25-8-2003ರಂದು ದಕ್ಷಿಣ ಕನ್ನಡ ಜಿಲ್ಲೆಯ ಸರ್ಕಾರಿ ನೌಕರರ ಸಂಘದ ಕಾರ್ಯಕಾರಿ ಸಮಿತಿಯ ಸಭೆಯಲ್ಲಿ ಸರ್ವಾನುಮತದಿಂದ ತೀರ್ಮಾನ ತೆಗೆದುಕೊಂಡಿರುತ್ತದೆ. ಆದ್ದರಿಂದ, ಮೇಲ್ಕಂಡ ಉದ್ದೇಶಗಳಿಗಾಗಿ ದಕ್ಷಿಣ ಕನ್ನಡ ಜಿಲ್ಲಾ ರಾಜ್ಯ ಸರ್ಕಾರಿ ನೌಕರರ ಒಂದು ದಿವಸದ ವೇತನವನ್ನು ನವೆಂಬರ್ 2003 ತಿಂಗಳ ವೇತನದಲ್ಲಿ ಕಟಾವುಗೊಳಿಸಿ, ಈ ರೀತಿ ಸಂಗ್ರಹವಾಗುವ ಹಣವನ್ನು ಮೇಲ್ಕಂಡ ಮೂರು ಉದ್ದೇಶಗಳಿಗಾಗಿ ವೆಚ್ಚ ಮಾಡಲು ತಲಾ ಮೂರನೇ ಒಂದು ಭಾಗದಂತೆ ಹಂಚಿಕೆ ಮಾಡಿ ಆದೇಶ ಹೊರಡಿಸುವಂತೆ ಮೇಲೆ (3) ರಲ್ಲಿ ಓದಲಾದ ದಿನಾಂಕ: 13-10-2003ರ ಪತ್ರದಲ್ಲಿ ಅಧ್ಯಕ್ಷರು ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘವು ಸರ್ಕಾರವನ್ನು ಕೋರಿರುತ್ತಾರೆ. ಅದರಂತೆ, ಸರ್ಕಾರವು ಈ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 26 ಎಸ್‌ಆರ್‌ಪಿ 2003, ಬೆಂಗಳೂರು, ದಿನಾಂಕ: 10ನೇ ನವೆಂಬರ್, 2003**

ಪ್ರಸ್ತಾವನೆಯಲ್ಲಿ ವಿವರಿಸಲಾದ ಸಂದರ್ಭಗಳ ಹಿನ್ನೆಲೆಯಲ್ಲಿ 2003ರ ಡಿಸೆಂಬರ್ ತಿಂಗಳ ದಿನಾಂಕ: 4ರಿಂದ 8ರವರೆಗೆ ದಕ್ಷಿಣ ಕನ್ನಡ ಜಿಲ್ಲೆಯ ಮೂಡಬಿದರೆಯಲ್ಲಿ ನಡೆಯಲಿರುವ 71ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಯಶಸ್ವಿಗಾಗಿ ಮತ್ತು ದಕ್ಷಿಣ

ಕನ್ನಡ ಜಿಲ್ಲಾ ರಂಗಮಂದಿರ ನಿರ್ಮಾಣ ಮತ್ತು ದಕ್ಷಿಣ ಕನ್ನಡ ಜಿಲ್ಲಾ ಶಾಖೆ ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘದ ಯೂನಿಯನ್ ಬ್ಲಾಕ್ ಕಟ್ಟಡ ನಿರ್ಮಾಣ ನಿಧಿಗಾಗಿ ದಕ್ಷಿಣ ಕನ್ನಡ ಜಿಲ್ಲೆಯ ಎಲ್ಲಾ ವರ್ಗದ ಅಧಿಕಾರಿ/ ನೌಕರರ ಒಂದು ದಿನದ ವೇತನವನ್ನು 2003ರ ನವೆಂಬರ್ ತಿಂಗಳ ವೇತನದಲ್ಲಿ ಕಟಾಯಿಸಲು ಸರ್ಕಾರವು ಈ ಮೂಲಕ ಮಂಜೂರಾತಿ ನೀಡಿದೆ. ಹೀಗೆ ಕಟಾಯಿಸಲಾದ ಒಟ್ಟು ಮೊತ್ತವನ್ನು ಜಿಲ್ಲಾಧಿಕಾರಿಗಳು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರಿಗೆ ಚೆಕ್ಕು ಮೂಲಕ ಖಜಾನೆ ಅಧಿಕಾರಿಗಳು ಸಂದಾಯ ಮಾಡುವ ವಿಧಿ ವಿಧಾನಗಳು ಈ ಕೆಳಗಿನಂತೆ ಇವೆ:-

ಅ) ನೌಕರರ ಒಂದು ದಿನದ ವೇತನ ವಂತಿಗೆಯನ್ನು 2003ರ ನವೆಂಬರ್ ತಿಂಗಳ ವೇತನದ ಬಿಲ್ಲಿನಿಂದ ಕಟಾವುಗೊಳಿಸುವ ಮೂಲಕ ವಸೂಲು ಮಾಡಲು ಆಯಾ ಕಛೇರಿ ಮುಖ್ಯಾಧಿಕಾರಿಗಳು ಮತ್ತು ಖಜಾನಾಧಿಕಾರಿಗಳು ಅಧಿಕಾರ ಪಡೆದಿರುತ್ತಾರೆ.

ಆ) ಒಂದು ದಿನದ ವೇತನವನ್ನು ವಂತಿಗೆಯಾಗಿ ಕೊಡಲಿಚ್ಛಿಸುವ ನೌಕರರು ಲಿಖಿತ ಮೂಲಕ ತಮ್ಮ ಇಚ್ಛೆಯನ್ನು ಸಂಬಂಧಪಟ್ಟ ಬಟವಾಡೆ ಅಧಿಕಾರಿಗಳಿಗೆ ಸಲ್ಲಿಸತಕ್ಕದ್ದು ಮತ್ತು ಅಂತಹ ಲಿಖಿತ ಪತ್ರ ನೌಕರರಿಂದ 2003 ರ ನವೆಂಬರ್ ತಿಂಗಳಿನ ಸಂಬಳದ ಬಿಲ್ಲನ್ನು ಖಜಾನೆಗೆ ಸಲ್ಲಿಸುವ ದಿನಾಂಕದ ಒಳಗಾಗಿ ಬಂದಿದ್ದಲ್ಲಿ ಮಾತ್ರ ಅವನ / ಳ ಒಂದು ದಿನದ ವೇತನವನ್ನು 2003ರ ನವೆಂಬರ್ ತಿಂಗಳಿನ ವೇತನ ಬಿಲ್ಲಿನಲ್ಲಿ ಕಟಾವು ಮಾಡತಕ್ಕದ್ದು. ಇಲ್ಲದಿದ್ದಲ್ಲಿ, ಅಂತಹ ಸರ್ಕಾರಿ ನೌಕರರ ಒಂದು ದಿನದ ವೇತನವನ್ನು ಕಟಾವು ಮಾಡತಕ್ಕದ್ದಲ್ಲ.

ಇ) ಪ್ರತಿಯೊಬ್ಬ ನೌಕರನ/ ಳ ವೇತನದಲ್ಲಿ ಈ ಕುರಿತು ಕಟಾಯಿಸಿದ ಅಂಶವನ್ನು ವೇತನದ ಬಿಲ್ಲಿನಲ್ಲಿ ಅವರ ಹೆಸರಿನ ಎದುರಿನಲ್ಲಿ "71ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ದೇಣಿಗೆ, ದಕ್ಷಿಣ ಕನ್ನಡ ಜಿಲ್ಲಾ ರಂಗಮಂದಿರ ನಿರ್ಮಾಣಕ್ಕಾಗಿ ಹಾಗೂ ದಕ್ಷಿಣ ಕನ್ನಡ ಜಿಲ್ಲಾ ಶಾಖೆ ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘದ ಯೂನಿಯನ್ ಬ್ಲಾಕ್ ಕಟ್ಟಡ ನಿರ್ಮಾಣಕ್ಕಾಗಿ ದೇಣಿಗೆ" ಎಂದು ಪ್ರತ್ಯೇಕ ಅಂಕಣದಲ್ಲಿ ಕಾಣಿಸಬೇಕು ಮತ್ತು ಸಮಗ್ರ ವೇತನ ಬಿಲ್ಲಿನಲ್ಲಿ ಕಡಿತಗೊಳಿಸಿದ ಒಟ್ಟು ಮೊತ್ತವನ್ನು ವೇತನ ಬಿಲ್ಲಿನ ಮುಖಪುಟದಲ್ಲಿ "71ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ದೇಣಿಗೆ, ದಕ್ಷಿಣ ಕನ್ನಡ ಜಿಲ್ಲಾ ರಂಗಮಂದಿರ ನಿರ್ಮಾಣಕ್ಕಾಗಿ ದೇಣಿಗೆ ಹಾಗೂ ದಕ್ಷಿಣ ಕನ್ನಡ ಜಿಲ್ಲಾ ಶಾಖೆ, ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘದ 'ಯೂನಿಯನ್ ಬ್ಲಾಕ್' ಕಟ್ಟಡ ನಿರ್ಮಾಣಕ್ಕಾಗಿ ದೇಣಿಗೆ" ಎಂಬುದಾಗಿ ಸ್ಪಷ್ಟವಾಗಿ ನಮೂದಿಸಬೇಕು ಮತ್ತು ಜಿಲ್ಲಾ ಖಜಾನೆ ಅಧಿಕಾರಿಗಳು ದೇಣಿಗೆಯ ಒಟ್ಟು ಮೊತ್ತವನ್ನು ಈ ಕೆಳಗೆ ನಮೂದಿಸಿರುವ ಲೆಕ್ಕ ಶೀರ್ಷಿಕೆಗೆ ವರ್ಗಾವಣೆ ಜಮಾ ಮೂಲಕ ಬಿಲ್ಲನ್ನು ಪಾವತಿ ಮಾಡಬೇಕು. ನೌಕರರಿಗೆ ವೇತನ ಬಟವಾಡೆ ಮಾಡಬೇಕಾಗಿರುವ ಉಳಿದ ನಿವ್ವಳ ಮೊತ್ತಕ್ಕೆ ಚೆಕ್ಕನ್ನು ಬಟವಾಡೆ ಅಧಿಕಾರಿಗೆ ಅವರು ನೀಡಬೇಕು.

ಈ) 71ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನಕ್ಕೆ ಮತ್ತು ಜಿಲ್ಲಾ ಕೇಂದ್ರ ಕನ್ನಡ ಭವನ ಕಟ್ಟಡ ನಿಧಿಗೆ ದಕ್ಷಿಣ ಕನ್ನಡ ಜಿಲ್ಲೆಯ ರಾಜ್ಯ ಸರ್ಕಾರಿ ಅಧಿಕಾರಿ/ ನೌಕರರ ವೇತನ ಬಿಲ್ಲಿನಲ್ಲಿ ಕಡಿತಗೊಳಿಸಿದ ಈ ವಂತಿಗೆ ಮೊತ್ತವನ್ನು"8658-00-102-4-15-71ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ದೇಣಿಗೆ, ದಕ್ಷಿಣ ಕನ್ನಡ ಜಿಲ್ಲಾ ರಂಗಮಂದಿರ ನಿರ್ಮಾಣಕ್ಕಾಗಿ ದೇಣಿಗೆ ಹಾಗೂ ದಕ್ಷಿಣ ಕನ್ನಡ ಜಿಲ್ಲಾ ಶಾಖೆ ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘದ 'ಯೂನಿಯನ್ ಬ್ಲಾಕ್' ಕಟ್ಟಡ ನಿರ್ಮಾಣಕ್ಕಾಗಿ ದೇಣಿಗೆ" ಎಂಬ ಲೆಕ್ಕ ಶೀರ್ಷಿಕೆಗೆ ಖಜಾನೆಗೆ ಜಮಾ ಮಾಡುವುದು. ಹೀಗೆ ಜಮಾ ಮಾಡುವ ಒಟ್ಟು ಮೊತ್ತಕ್ಕೆ ಜಿಲ್ಲಾ ಖಜಾನೆ ಅಧಿಕಾರಿಯು ಜಿಲ್ಲಾಧಿಕಾರಿಗಳು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರಿಗೆ ಕ್ರೋಢೀಕೃತ ಮೊಬಲಗಿಗೆ ಚೆಕ್ಕನ್ನು ನೀಡುವುದು.

ಉ) 2003ರ ನವೆಂಬರ್ ತಿಂಗಳಿನಲ್ಲಿ ಸ್ವೀಕರಿಸಲಾದ ವೇತನ ಬಿಲ್ಲುಗಳ ನಿರ್ವಹಣೆಯನ್ನು 2003ರ ಡಿಸೆಂಬರ್ 10ನೇ ದಿನಾಂಕದೊಳಗೆ ಪೂರೈಸಬೇಕು. 2003ರ ನವೆಂಬರ್ ತಿಂಗಳು ಅಂತ್ಯಗೊಂಡ ನಂತರ ಪಾವತಿ ಮಾಡಿದ ಬಿಲ್ಲುಗಳ ಪ್ರಕರಣಗಳಲ್ಲಿ ಅವುಗಳನ್ನು ಪಾವತಿ ಮಾಡಿದ ಒಂದು ವಾರದೊಳಗೆ ಜಿಲ್ಲಾಧಿಕಾರಿಗಳು, ದಕ್ಷಿಣಕನ್ನಡ ಜಿಲ್ಲೆ, ಮಂಗಳೂರು ಇವರಿಗೆ ಚೆಕ್ಕನ್ನು ಕಳುಹಿಸಬೇಕು ಹಾಗೂ ಹೀಗೆ ಕೈಗೊಂಡ ಕ್ರಮದ ಬಗ್ಗೆ ಒಂದು ಪ್ರತಿಯನ್ನು ಆರ್ಥಿಕ ಇಲಾಖೆಗೆ ಕಳುಹಿಸಬೇಕು.

ಊ) ಮಹಾಲೇಖಪಾಲರು ನೀಡಿದ ಅಧಿಕಾರ ಪತ್ರದ ಮೇಲೆ ತಮ್ಮ ವೇತನವನ್ನು ಖಜಾನೆಯಿಂದ ಪಡೆಯುವ ಅಧಿಕಾರಿಗಳೂ ಸಹ ಮೇಲೆ ಕಾಣಿಸಿದ ಕ್ರಮವನ್ನು ಪಾಲಿಸುವುದು.

ಋ) ಜಿಲ್ಲಾಧಿಕಾರಿ, ದಕ್ಷಿಣ ಕನ್ನಡ ಜಿಲ್ಲೆ ಅವರು ಈ ವಂತಿಗೆ ಹಣವನ್ನು ಮೂರು ಸಮಭಾಗವಾಗಿ ವಿಂಗಡಿಸಿ ಉದ್ದೇಶಿತ ಮೂರು ಯೋಜನೆಗಳಿಗೆ ಬಳಸಿಕೊಳ್ಳಲು ಅಧಿಕಾರ ಹೊಂದಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ. ಆರ್. 1496

ಎನ್. ಟಿ. ನಾಯ್ಕ್

ಸರ್ಕಾರದ ಉಪಕಾರ್ಯದರ್ಶಿ, ಆರ್ಥಿಕ ಇಲಾಖೆ (ಸೇವೆಗಳು-2).

## FINANCE SECRETARIAT

**Sub :** Conversion of Non- Banking Sub- Treasuries into Banking Sub-Treasuries.

**Read:** Letter No. Khani: Prakriye: 5: 2003-2004 dated: 13-8-2003 from the Director of Treasuries, Bangalore.

**Preamble:**

The Director of Treasuries in his letter read above has stated that the Syndicate Bank, Head Office, Manipal vide letter No. 2500/ 1831B/ 0052/ ACC/ GTC/ TRS, dated: 22-7-2003 has agreed for taking over the government Transactions of Joida, Navalagund and Kundagola Taluk Treasuries and RBI,

Bangalore vide letter No. PAD (BG) No: 1721/ 01/ 2000-02/ 2003-04, dated 13-08-2003 has informed that the Syndicate Bank has agreed to take over the cash transactions of the above 3 non- Banking Sub-Treasuries. Further RBI has asked the State Government to follow up this matter directly with the Syndicate Bank for taking further necessary action. The Director of Treasuries Bangalore has therefore requested for the orders of the Government to transfer the Government Cash Transactions of Joida, Navalgund and Kundagola Taluk Treasuries to the local branches of the Syndicate Bank. This proposal has been examined by Government in detail. Hence the following order.

**Government Order No. FD 92 AKHAYI 2003, Bangalore, Dated: 1st October, 2003**

Sanction is hereby accorded to the conversion of the Joida Sub- Treasury in Uttara Kannada District, Navalagund and Kundagola Taluk Sub- Treasuries in Dharwad District into Banking Treasuries with cheque system and to transfer cash transactions of these sub- Treasuries to the local branches of Syndicate Bank. The actual date of transfer of cash work to the Bank will be notified by the District Treasury Officer. Uttara Kannada and Dharwad in Consultation with the Bank authorities and the said date will hereafter be referred to as the appointed date.

The special steps to be taken on the eye of conversion of the said Sub-Treasuries into Banking Treasuries and the classes of cash transactions to be taken over by the bank are detailed in Annexure-"A" to this order.

On and from the appointed date the branch of the Bank will conduct the cash business of the Sub-Treasury and render daily accounts to the Sub- Treasury officer Joida, Navalagund and Kundagola Treasuries in the manner laid down in the rules in the Karnataka Treasury Code and in the compilation of the Central Treasury Rules.

For the conduct of transaction that will continue to be handled at the Sub-Treasury, a permanent advance of Rs. 200/- (Rupees Two Hundred only) is sanctioned to each treasury. The amount may be drawn by the Sub- Treasury Officer. Joida, Navalagund and Kundagola Taluk from the Bank on a simple receipt. The expenditure out of the imprest should be recouped daily, the connected receipts it any, being remitted to the Bank and the amount paid being drawn from the Bank separately for each class of transaction. Should a demand be presented at the Sub-Treasury which cannot be met out of the balance of the Permanent Advance, the Sub- Treasury officer, Joida, Navalgund and Kundagola Taluk Treasury may draw the extra amount required from the Bank on a payee's receipt indicating the purpose for which money is required and furnishing a pay order thereon.

The normal cash balance fixed for these Sub- Treasuries should be treated as withdrawn with effect from the appointed date and the normal balance fixed for the respective District as a whole reduced correspondingly.

The District and Sub-Treasury officers should follow strictly any instructions that the Accountant General in Karnataka, Bangalore may issue in the matter.

The police guards required for the Bank shall be provided by the Inspector General of Police, in Karnataka, Bangalore under usual terms.

The District Treasury Officer, District Treasury, Uttara Kannada and Dharwad are requested to make adequate arrangements to effect the transfer on the appointed date under report to Government in the Finance Department as well as to the Director of Treasuries. He is also requested to see that the changes are effected smoothly and maximum convenience and guidance are afforded to other departments and the General Public in the first few days to obviate inconvenience to them.

The District Treasury Officer, District Treasury Uttara Kannada and Dharwad are also requested to depute an experienced official in banking treasury work to the Sub- Treasury for about a week to enable the staff to become familier with the new arrangement.

New forms and Registers required at the Sub- Treasury for immediate use should be spared from the District Treasury and an indent placed with the Director, Government Printing and Stationery for future supply.

By Order and in the name of the Governor of Karnataka,

**N. PRABHAKAR**

Under Secretary to Government, Finance Department (Administration).

**ANNEXURE - A**

1. The Cash Balance of the Sub Treasury on the opening of the appointed date should be remitted to the Bank on the same day upon a separate challan for credit to the head "Local Cash remittances" under advise to the Government in the Finance Department and the Accountant General.

2. The cash transactions connected with the following items of work will be conducted at the Sub Treasury itself as heretofore. The remitters of money or the payees, as the case may be need not in such cases go to the Bank for their transactions:-

a) Disbursement of Indian Military Pensions (on muster rolls)
b) Transactions on account of receipts and payment under Savings Bank.
c) Any other items of work to be specified by Government.

**N. R.:-** The amounts collected at the Sub-Treasury should be remitted to the Bank daily under challans indicating the Head of account. Separate challans should be used for different major heads. Amounts disbursed from the Permanent advance should be recouped from the Bank daily on simple payees' receipts furnishing classification similarly.

Amounts required for disbursement in excess of the balance of the permanent advance should be drawn from the Bank on simple payee's receipts, furnishing the heads of classification in the same way.

3. Pensioners will be paid their pension at the Bank on Cheques issued by the Sub-Treasury Officer.

4. Taxes and fees on motor vehicles hitherto collected at the treasury will on and after the "appointed date" be collected at the Bank direct. The licences, etc., will be issued by the authorities concerned as usual on surrender of the challan receipted by the Bank and after verification of the credit for the taxes or fees paid in the Treasury Accounts.

5. General, Court fee, Postal and other Stamps including Postal Stationery will be issued at the treasury itself even after the "appointed date".

6. Cases, where remittances into and drawal from the Bank may be arranged directly without obtaining an authorization from the Treasury Officer are specified in Annexure "B". In other case, the documents on which money is presented or payment claimed at the Bank should have the authorisation of the Sub- Treasury Officer. The challans or bills so authorised, if not presented to the Bank within ten days of their authorization require revalidation by the Treasury Officer.

7. The Prescribed form of challan alone should be used for all remittances into the Bank. The forms will be supplied by the departmental officers/ Sub- Treasury.

8. Cheques on Banks received by Government Officers in payment of Central or State Government dues or in settlement of transactions should be remitted to the Bank direct. Such cheques should be endorsed in favour of the Bank in all cases. Form K. F. C. 2 (Bank) itself may be used as challan in such cases. Pending realisation of the amounts thereof a receipt or token for the cheque only will be given by the Bank in the first in instance. The final receipt will be delivered to the parties by the Bank soon after the cheques are cleared.

There will be a daily clearance of cheques accepted and the transactions will be included in the daily account rendered to the Sub-Treasury after the cheques have been cleared.

**NOTE:** The Bank reserved to itself the right to refuse to accept cheque, the collection of which in its opinion, cannot reasonably be undertaken and which it could not accept on behalf of its own constituents.

9. Cheques drawn by Government Officers for drawing funds from the Bank should be addressed to the Bank and not to the Sub-Treasury Officer. Such cheques are negotiable. Until new cheque forms are printed the required correction may be made in the existing forms in manuscript or rubber stamp. Such alterations do not require attestation. Cheque books will not be supplied by the Bank. They will be supplied by the Sub-Treasury as at present.

**NOTE:** Cheques issued by such officers on the Sub-Treasuries previously and remaining unpaid on the "appointed date" will be cashed at the Bank direct subject to the rules of currency etc., The information required by the Bank in this behalf will be furnished by the Sub-Treasury as indicate at para 10 infra.

10. The Sub-Treasury Officer will arrange to forward to the Bank one week in advance of the "appointed date" the specimen signature of the Government Officers authorized to operate on the P. D. and other accounts at the Sub-Treasury, copies of standing instructions, if any, in the assignment, drawing P.D. Accounts, together with the correspondence pertaining to stopped cheques, etc., should also be forwarded to the Bank on or before the "appointed date".

11. All Officers drawing cheques on the Bank should furnish to the Bank on the "appointed date:" a list of their cheques issued prior to the "appointed date" and outstanding payment on that date by obtaining the necessary information from the Sub- Treasury.

12. Monthly pay bills of Government officers and officers should be presented at the Sub-Treasury for scrutiny three days in advance invariably as prescribed in Article 80, of Karnataka Financial code, 1958, Cheques will be issued for such pay bills in the Sub-Treasury and will be delivered on last working day. Bills presented for passing should be merely signed without receipting the contents, which should be done only after the bill is received back from the Sub-Treasury with pay orders and before presentation at the Bank.

**ANNEXURE - B**

Transactions in respect of which the challans cheques or refund orders need not pass through the sub-Treasury officers before presentation at the Bank.

**Payments into the Banks**

1. Remittances of Sales -Tax in the Special forms prescribed.
2. - do - Forest revenue.
3. - do - Civil and Criminal Courts Deposits

4. - do - Fees, Fines, etc., Criminal Courts.
5. - do - Food Depots.
6. - do - Income tax revenue.
7. - do - Union Excise Duties
8. - do - Life Insurance Premia relating to Govt. Insurance Dept.
9. - do - into Personal Deposit Accounts kept at the Bank.
10. - do - of other items of challans which have been signed or attested by the Departmental Officer on whose behalf the moneys are credited.
11. - do - of amounts on special printed forms of challans
12. - do - of Land Revenue, Muzarai and Village Panchayat.

**Drawal from the Bank**

1. Cheques drawn by Government Officers on Personal Deposit Accounts kept at the Bank.
2. Cheques drawn by the Officers of the Judicial Dept. Against Personal Ledger Accounts.
3. Cheques drawn by Public Works Department.
4. Cheques drawn by Forest Department.
5. Cheques drawn by Government Commercial Undertakings.
6. Cheques drawn by Government Insurance Department.
7. Cheques drawn by the Chief Accounts Officer, Mysore State Electricity Board.
8. Cheques drawn by the Bursar, Mysore University.
9. Refund Orders of the Income tax Department.
10. Cheques of the Postal Department.
11. Cheques of the Difence Department.
12. Refund Orders of the Sales tax Department.

**N. PRABHAKAR**

P. R. 1498 Under Secretary to Government, Finance Department (Administration).

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ**

**ವಿಷಯ:** ಡಾ: ಆರ್. ಎಲ್. ನಾರಾಯಣ್, ವೈದ್ಯಾಧಿಕಾರಿ ಪ್ರಾ. ಆ. ಕೇಂದ್ರ, ಸೋಮನಹಳ್ಳಿ, ಇವರ ಅನಧಿಕೃತ ಗೈರುಹಾಜರಿ ವಿರುದ್ಧ ಶಿಸ್ತು ಕ್ರಮ -ಸೇವೆಯಿಂದ ವಜಾ ಮಾಡುವ ದಂಡನೆ ವಿಧಿಸುವ ಬಗ್ಗೆ ಆದೇಶ.

**ಓದಲಾಗಿದೆ:**
1. ಸರ್ಕಾರದ ಪತ್ರ ಸಂಖ್ಯೆ: ಆಕುಕ 148 ಎಂಎಸ್ಎ 98, ದಿನಾಂಕ: 13-10-1999.
2. ಸರ್ಕಾರದ ಆದೇಶ ಸಂಖ್ಯೆ: ಆಕುಕ 148 ಎಂಎಸ್ಎ 98, ದಿನಾಂಕ: 14-3-2000.
3. ವಿಶೇಷಾಧಿಕಾರಿ (ಕಾನೂನು ಕೋಶ), ಆಕುಕ ಸೇವೆಗಳ ನಿರ್ದೇಶನಾಲಯ, ಬೆಂಗಳೂರು ಇವರ ಪತ್ರ ಸಂಖ್ಯೆ: ವಿಅ/ ವಿಚಾರಣೆ/ 29/ 99-2000, ದಿನಾಂಕ: 16-10-2000.
4. ಸರ್ಕಾರದ ಪತ್ರ ಸಂಖ್ಯೆ: ಆಕುಕ 148 ಎಂಎಸ್ಎ 98 ದಿನಾಂಕ: 24-10-2000.

**ಪ್ರಸ್ತಾವನೆ:**

ಡಾ: ಆರ್. ಎಲ್. ನಾರಾಯಣ್, ವೈದ್ಯಾಧಿಕಾರಿ, ಇವರ ಅನಧಿಕೃತ ಗೈರುಹಾಜರಿಗೆ ಸಂಬಂಧಿಸಿದಂತೆ ಕಾರಣ ಕೇಳುವ ನೋಟೀಸನ್ನು ದೋಷಾರೋಪಣಾ ಪಟ್ಟಿಯೊಂದಿಗೆ ಮೇಲೆ (1)ರಲ್ಲಿ ಓದಲಾದ ಪತ್ರದ ಮೂಲಕ ಕಳುಹಿಸಲಾಗಿತ್ತು.

ಆರೋಪಿತ ವೈದ್ಯಾಧಿಕಾರಿಯು ಸದರಿ ಕಾರಣ ಕೇಳಿರುವ ನೋಟೀಸನ್ನು ಸ್ವೀಕರಿಸಿದ್ದು, ಸಾಕಷ್ಟು ಕಾಲಾವಕಾಶ ನೀಡಿದ್ದರೂ ರಕ್ಷಣಾ ಹೇಳಿಕೆಯನ್ನು ಸಲ್ಲಿಸದ ಕಾರಣ ಅವರು ಹೇಳುವುದು ಏನೂ ಇಲ್ಲವೆಂದು ಭಾವಿಸಿ ಸರ್ಕಾರವು ಈ ಪ್ರಕರಣವನ್ನು ಮೇಲೆ (2) ರಲ್ಲಿ ಓದಲಾದ ಆದೇಶದಲ್ಲಿ ಇಲಾಖಾ ವಿಚಾರಣೆಗೆ ಒಳಪಡಿಸಿ ಆದೇಶಿಸಿದೆ. ಇದರ ನಂತರ ವಿಚಾರಣಾಧಿಕಾರಿಗಳನ್ನು ಮತ್ತು ಮಂಡನಾಧಿಕಾರಿಗಳನ್ನು ನೇಮಿಸಿದೆ. ಆಪಾದಿತ ವೈದ್ಯರಿಗೆ ವಿಚಾರಣಾಧಿಕಾರಿಗಳು ಹಲವಾರು ಟೆಲಿಗ್ರಾಂ, ನೆನಪೋಲೆ ಹಾಗೂ ನೊಂದಾಯಿತ ಅಂಚೆ ಮೂಲಕ ನೋಟೀಸನ್ನು ಕಳುಹಿಸಿದಾಗಲೂ ಸಹ ವಿಚಾರಣೆಗೆ ಹಾಜರಾಗದೆ ಇರುವುದರಿಂದ ಮೇಲೆ (3)ರಲ್ಲಿ ಓದಲಾದ ಪತ್ರದಲ್ಲಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯದ ವಿಶೇಷಾಧಿಕಾರಿ (ಕಾನೂನು ಕೋಶ), ರವರು ಆಪಾದಿತ ವೈದ್ಯರ ಅನಧಿಕೃತ ಗೈರುಹಾಜರಿಯ ಆರೋಪದ ಬಗ್ಗೆ ಏಕಪಕ್ಷೀಯ ವಿಚಾರಣೆಯನ್ನು ನಡೆಸಿ, ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ್ದಾರೆ.

ಮೇಲೆ (4)ರಲ್ಲಿ ಓದಲಾದ ತಿಳುವಳಿಕೆ ಪತ್ರದಲ್ಲಿ ಆಪಾದಿತ ವೈದ್ಯರಿಗೆ ವಿಚಾರಣಾ ವರದಿಯನ್ನು ಕಳುಹಿಸಿ, ಅದನ್ನು ಸರ್ಕಾರವು ಅಂಗೀಕರಿಸುವ ಬಗ್ಗೆ ಅವರೇನಾದರೂ ಹೇಳುವುದು ಇದ್ದಲ್ಲಿ ಲಿಖಿತದ ಮೂಲಕ ಸರ್ಕಾರಕ್ಕೆ ಸಲ್ಲಿಸುವಂತೆ ತಿಳಿಸಲಾಗಿತ್ತು. ಸದರಿ ವರದಿಯನ್ನು ಆಪಾದಿತರ ಅವಗಾಹನೆಗೆ ನೊಂದಾಯಿತ ಅಂಚೆ ಮೂಲಕ ಕಳುಹಿಸಿದಾಗ ಅದು ವಾಪಸ್ ಬಂದಿರುತ್ತದೆ. ತದನಂತರ, ಆಪಾದಿತರು ರಜೆ ಅರ್ಜಿಗಳಲ್ಲಿ ನೀಡಿರುವ ವಿಳಾಸಕ್ಕೆ ಒಬ್ಬ ಜವಾಬ್ದಾರಿಯುತ ಅಧಿಕಾರಿಯವರನ್ನು ಕಳುಹಿಸಿ, ಮಹಜರು ಮಾಡಿ ನೋಟೀಸನ್ನು ಸದರಿ ವಿಳಾಸದ ಮನೆಗೆ ಅಂಟಿಸಲಾಗಿದೆ. ಇದರಿಂದ ಕಾನೂನಿನ ರೀತಿ ನೋಟೀಸನ್ನು ಜಾರಿ ಮಾಡಿದಂತಾಗಿದೆ. ಆಪಾದಿತ ವೈದ್ಯರಿಂದ ಯಾವುದೇ ಉತ್ತರ ಸರ್ಕಾರದಲ್ಲಿ ಸ್ವೀಕರಿಸಿರುವುದಿಲ್ಲ.

ಆದ್ದರಿಂದ ಸರ್ಕಾರವು ವಿಚಾರಣಾಧಿಕಾರಿಗಳ ವಿಚಾರಣಾ ವರದಿಯನ್ನು ಒಪ್ಪಿಕೊಂಡು ಡಾ: ಆರ್. ಎಲ್. ನಾರಾಯಣ್ ಇವರು ದಿನಾಂಕ: 6-3-1998 ರಿಂದ ಅನಧಿಕೃತವಾಗಿ ಸರ್ಕಾರಿ ಸೇವೆಗೆ ಗೈರುಹಾಜರಾಗಿರುವ ಆರೋಪ ಸಾಬೀತಾಗಿರುವುದರಿಂದ ಕರ್ನಾಟಕ

ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 8 (viii) ರಡಿಯಲ್ಲಿ ಸೇವೆಯಿಂದ ವಜಾ ಮಾಡಲು ತೀರ್ಮಾನಿಸಿದೆ. ಆದುದರಿಂದ ಈ ಕೆಳಗಿನ ಆದೇಶ.

**ಆದೇಶ ಸಂಖ್ಯೆ: ಆಕುಕ 148 ಎಂಎಸ್ಎ 98, ಬೆಂಗಳೂರು, ದಿನಾಂಕ: 13ನೇ ನವೆಂಬರ್, 2003**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದಾಗಿ, ಸರ್ಕಾರವು, ಡಾ: ಆರ್. ಎಲ್. ನಾರಾಯಣ, ವೈದ್ಯಾಧಿಕಾರಿ ಪ್ರಾಥಮಿಕ ಆರೋಗ್ಯ ಕೇಂದ್ರ, ಸೋಮನಹಳ್ಳಿ, ಕೆ. ಆರ್. ಪೇಟೆ ತಾಲ್ಲೂಕು, ಮಂಡ್ಯ ಜಿಲ್ಲೆ ಇವರನ್ನು, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 8 (viii) ರಲ್ಲಿ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ತಕ್ಷಣದಿಂದ ಜಾರಿಗೆ ಬರುವಂತೆ ಇವರನ್ನು ಸರ್ಕಾರಿ ಸೇವೆಯಿಂದ ವಜಾ ಮಾಡಿ, ದಂಡನೆ ವಿಧಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ. ಆರ್. 1500

**ಎಸ್. ಕೆ. ತೆಗ್ಗಿನಮನಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

## ಶಿಕ್ಷಣ ಸಚಿವಾಲಯ

**ತಿದ್ದುಪಡಿ ಸಂಖ್ಯೆ: ಇಡಿ 137 ಟಿಇಸಿ 2003, ಬೆಂಗಳೂರು, ದಿನಾಂಕ: 24ನೇ ನವೆಂಬರ್, 2003**

ದಿನಾಂಕ: 13-12-2002 ಸಂಖ್ಯೆ: ಇಡಿ 138 ಟಿಇಸಿ 2002ರ ಆದೇಶವನ್ನು ಭಾಗಶಃ ಮಾರ್ಪಡಿಸಿ ಹೊಸ ಇಂಜಿನಿಯರಿಂಗ್ ಕಾಲೇಜುಗಳ ಪ್ರಾರಂಭಿಸುವಿಕೆ ಮತ್ತು ಹಾಲಿ ಇರುವ ಇಂಜಿನಿಯರಿಂಗ್ ಕಾಲೇಜುಗಳಲ್ಲಿ ಎಂ.ಬಿ.ಎ. / ಎಂ.ಸಿ.ಎ ಕೋರ್ಸುಗಳ ಪ್ರಾರಂಭಿಸುವಿಕೆ, ಹೊಸ ಎಂ.ಬಿ.ಎ/ ಎಂ.ಸಿ.ಎ. ಕಾಲೇಜುಗಳ ಸ್ಥಾಪನೆ ಹಾಗೂ ಹಾಲಿ ಇರುವ ಮ್ಯಾನೇಜ್‌ಮೆಂಟ್ ಕಾಲೇಜುಗಳಲ್ಲಿ ಎಂ.ಬಿ.ಎ/ ಎಂ.ಸಿ.ಎ/ ಕೋರ್ಸುಗಳ ಪ್ರಾರಂಭಿಸುವಿಕೆ ಹಾಗೂ ಪ್ರವೇಶಾತಿ ಹೆಚ್ಚಳದ ಕುರಿತು ಈ ಕೆಳಕಂಡಂತೆ ತಿದ್ದಿ ಓದಿಕೊಳ್ಳತಕ್ಕದ್ದು.

1. ಇಂಜಿನಿಯರಿಂಗ್ ಕಾಲೇಜುಗಳಲ್ಲಿರುವ ಇಂಜಿನಿಯರಿಂಗ್ ಕೋರ್ಸುಗಳು / ಎಂ.ಬಿ.ಎ. ಹಾಗೂ ಎಂ.ಸಿ.ಎ. ಕೋರ್ಸುಗಳನ್ನು ತಾಂತ್ರಿಕ ಶಿಕ್ಷಣ ನಿರ್ದೇಶಕರ ತಜ್ಞರ ಸಮಿತಿ ಪರಿವೀಕ್ಷಣೆ ಮಾಡುವುದು.
2. ಮ್ಯಾನೇಜ್‌ಮೆಂಟ್ ಕಾಲೇಜುಗಳಲ್ಲಿರುವ ಎಂ.ಬಿ.ಎ/ ಬಿ.ಹೆಚ್.ಎಂ. ಕೋರ್ಸುಗಳಿಗೆ ಕಾಲೇಜು ಶಿಕ್ಷಣ ಇಲಾಖೆಯ ಹೆಚ್ಚುವರಿ ನಿರ್ದೇಶಕರು / ಸಹ ನಿರ್ದೇಶಕರ ಅಧ್ಯಕ್ಷತೆಯ ತಜ್ಞರ ಸಮಿತಿ ಸ್ಥಳ ತನಿಖೆ ಮಾಡುವುದು.
3. ಎಂ.ಸಿ.ಎ. ಕಾಲೇಜುಗಳಲ್ಲಿರುವ ಎಂ. ಸಿ. ಎ. ಕೋರ್ಸುಗಳಿಗೆ ಮಾತ್ರ ತಾಂತ್ರಿಕ ಶಿಕ್ಷಣ ನಿರ್ದೇಶನಾಲಯದ ಸಹ ನಿರ್ದೇಶಕರು (ಎ. ಟಿ. ಎಸ್) ಅವರ ತಜ್ಞರ ಸಮಿತಿಯು ಪರಿವೀಕ್ಷಣೆ ನಡೆಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ. ಆರ್. 1501

**ಕೆ. ಎಸ್. ವೇಣುಗೋಪಾಲ್**

ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ಸುತ್ತೋಲೆ ಸಂಖ್ಯೆ: ಸಿಆಸುಇ 17 ಸೇಇವಿ 2002, ಬೆಂಗಳೂರು, ದಿನಾಂಕ: 24ನೇ ನವೆಂಬರ್ 2003**

**ವಿಷಯ:** ದಿನಗೂಲಿ ಆಧಾರದ ಮೇಲೆ ಕರ್ತವ್ಯ ನಿರ್ವಹಿಸುತ್ತಿರುವ ಸಿಬ್ಬಂದಿಯ ವಿರುದ್ಧ ಶಿಸ್ತು ಕ್ರಮ ಜರುಗಿಸುವ ಬಗ್ಗೆ.

ದಿನಗೂಲಿ ಆಧಾರದ ಮೇಲೆ ನೇಮಕಾತಿ ಹೊಂದಿ ಸೇವೆಯಲ್ಲಿ ಮುಂದುವರೆಯುತ್ತಿರುವ ಹಲವಾರು ನೌಕರರು ಕರ್ತವ್ಯ ಲೋಪ, ಹಣ ದುರುಪಯೋಗ ಮುಂತಾದ ದುರ್ನಡತೆಯನ್ನು ಎಸಗಿದ ಬಗ್ಗೆ ಸರ್ಕಾರದ ಗಮನಕ್ಕೆ ಬಂದಿದೆ. ಈ ನೌಕರರ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಯನ್ವಯ ಕ್ರಮ ಕೈಗೊಳ್ಳುವಂತಿಲ್ಲ ಏಕೆಂದರೆ ಇವರು ಸರ್ಕಾರಿ ನೌಕರರಲ್ಲ. ಇವರ ವಿರುದ್ಧ ಶಿಸ್ತು ಕ್ರಮ ತೆಗೆದುಕೊಳ್ಳುವ ವಿಧಾನವನ್ನು ತಿಳಿಸುವಂತೆ ಅನೇಕ ಇಲಾಖೆಗಳು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯನ್ನು ಕೋರಿವೆ.

ಈ ವಿಷಯವನ್ನು ಪರಿಶೀಲಿಸಲಾಗಿದೆ. ದಿನಗೂಲಿ ಆಧಾರದ ಮೇಲೆ ನೇಮಕಾತಿ ಹೊಂದಿದ, ಸಿಬ್ಬಂದಿಯು ಯಾವುದೇ ದುರ್ನಡತೆ ಎಸಗಿದಾಗ ಮೊದಲಿಗೆ ದುರ್ನಡತೆಯ ವಿವರಗಳನ್ನು ನೀಡಿ, ಆ ದುರ್ನಡತೆ ಎಸಗಿದ್ದಕ್ಕಾಗಿ ಸಂಬಂಧಿತ ನೌಕರರಿಗೆ ಸೂಕ್ತ ಶಿಕ್ಷೆಯನ್ನು ಏಕೆ ನೀಡಬಾರದೆಂದು ಕೇಳಿ ಒಂದು ನೋಟೀಸನ್ನು ನೀಡಬೇಕು. ಸದರಿ ನೋಟೀಸಿಗೆ ಅವರು ನೀಡುವ ಉತ್ತರವನ್ನು ಕಚೇರಿ ಮುಖ್ಯಸ್ಥರು ಪರಿಶೀಲಿಸಿ ಸೂಕ್ತ ತೀರ್ಮಾನವನ್ನು ತೆಗೆದುಕೊಳ್ಳಬೇಕು. ಒಂದು ವೇಳೆ, ಕಛೇರಿ ಮುಖ್ಯಸ್ಥರು ನೌಕರರ ಮೇಲಿನ ಆರೋಪವು ಸಾಬೀತಾಗಿದೆ ಎಂಬ ತೀರ್ಮಾನಕ್ಕೆ ಬಂದಲ್ಲಿ, ಒಂದು ವಿವರವಾದ ಆದೇಶ (speaking Order)ವನ್ನು ಹೊರಡಿಸಿ ತಕ್ಕದಾದ ದಂಡನೆಯನ್ನು ವಿಧಿಸಬಹುದು. ವಿಧಿಸಬಹುದಾದ ದಂಡನೆಗಳೆಂದರೆ ಜುಲ್ಮಾನೆ (fine), ಸರ್ಕಾರಕ್ಕೆ ನಷ್ಟ ಉಂಟು ಮಾಡಿದ್ದಲ್ಲಿ ಆ ನಷ್ಟವನ್ನು ವಸೂಲು ಮಾಡುವುದು, ದಿನಗೂಲಿ ಸೇವೆಯಿಂದ ತೆಗೆದುಹಾಕುವುದು. ಸಾಬೀತಾಗಿದೆಯೆಂದು ಕಂಡು ಬಂದ ಆರೋಪದ ಗಂಭೀರತೆಗೆ ಅನುಗುಣವಾದ ದಂಡನೆಯನ್ನು ವಿಧಿಸಬಹುದಾಗಿದೆ.

**ಎಚ್. ಆರ್. ನಾಗೇಂದ್ರ**

ಪಿ. ಆರ್. 1502

ಸರ್ಕಾರದ ಅಧೀನ ಕಾರ್ಯದರ್ಶಿ-2,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ

(ಸೇವಾ ನಿಯಮಗಳು).

**ಸುತ್ತೋಲೆ ಸಂಖ್ಯೆ: ಸಿಆಸುಇ 10 ಸೇಇವಿ 2003, ಬೆಂಗಳೂರು, ದಿನಾಂಕ: 12ನೇ ನವೆಂಬರ್ 2003**

**ವಿಷಯ:** ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ರ ಅಡಿಯಲ್ಲಿ ಇಲಾಖಾ ವಿಚಾರಣೆ ನಡೆಯುತ್ತಿದ್ದಾಗ, ಸರ್ಕಾರಿ ನೌಕರನು ಮೃತನಾದಾಗ, ಇಲಾಖಾ ವಿಚಾರಣೆಯ ಮುಂದಿನ ಕ್ರಮದ ಕುರಿತು.

ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ರ ನಿಯಮ 8 (iv)ರ ಉದ್ಧೃತ ಭಾಗವನ್ನು ಈ ಕೆಳಗೆ ಉದ್ಧರಿಸಿದೆ.

"(i) xxxxx
(ii) xxxxx
(iii) xxxxx
(iii-a) xxxxx
(iv) ರಾಜ್ಯ ಸರ್ಕಾರಕ್ಕೆ ಅಥವಾ ಅಧಿಕಾರಿಯ ಸೇವೆಯನ್ನು ಯಾರಿಗೆ ಎರವಲು ಕೊಡಲಾಗಿತ್ತೋ, ಆ ಕೇಂದ್ರ ಸರ್ಕಾರ, ಯಾವುದೇ ಇತರ ರಾಜ್ಯದ ಸರ್ಕಾರ, ಯಾರೇ ವ್ಯಕ್ತಿ, ಸಂಸ್ಥೆ ಅಥವಾ ಪ್ರಾಧಿಕಾರಿಗೆ, ಆ ಅಧಿಕಾರಿಯ ನಿರ್ಲಕ್ಷ್ಯದಿಂದ ಅಥವಾ ಆಜ್ಞೆಗಳ ಉಲ್ಲಂಘನೆಯಿಂದ ಉಂಟಾದ ಯಾವುದೇ ಹಣ ರೂಪದ ನಷ್ಟವನ್ನು ಪೂರ್ಣವಾಗಿ ಅಥವಾ ಭಾಗಶಃ ವೇತನದಿಂದ ವಸೂಲಿ ಮಾಡುವುದು."

2. ಮೇಲೆ ತಿಳಿಸಿದಂತೆ, ಆರ್ಥಿಕ ನಷ್ಟವನ್ನು ಆರೋಪಿತ ಸರ್ಕಾರಿ ನೌಕರರಿಂದ ವಸೂಲು ಮಾಡಬೇಕಾದಲ್ಲಿ, ಸದರಿ ನಿಯಮಾವಳಿಯ ನಿಯಮ 11 ಅಥವಾ 12ರ ಪ್ರಕಾರ ಕ್ರಮವನ್ನು ಜರುಗಿಸಿ ವಸೂಲು ಮಾಡಬೇಕಾಗುತ್ತದೆ. ಈ ರೀತಿ ಮೇಲೆ ತಿಳಿಸಿದ ನಿಯಮಗಳಂತೆ, ಆರೋಪಿತ ಸರ್ಕಾರಿ ನೌಕರನ ಮೇಲೆ ಸಕ್ಷಮ ಪ್ರಾಧಿಕಾರಿಯು ಇಲಾಖೆ ವಿಚಾರಣೆಯನ್ನು ನಡೆಸುತ್ತಿದ್ದಾಗ, ಆರೋಪಿತ ಸರ್ಕಾರಿ ನೌಕರನು ಮರಣ ಹೊಂದಿದಾಗ, ಅಂತಹ ಪ್ರಕರಣಗಳಲ್ಲಿ ಯಾವ ರೀತಿಯ ಮುಂದಿನ ಕ್ರಮ ಕೈಗೊಳ್ಳಬೇಕೆಂಬ ಬಗ್ಗೆ ಅನೇಕ ಇಲಾಖೆಗಳು ಸ್ಪಷ್ಟೀಕರಣವನ್ನು ಕೇಳಿವೆ.

3. ಕರ್ನಾಟಕ ಉಚ್ಚ ನ್ಯಾಯಾಲಯವು ಸ್ಟೇಟ್ ಬ್ಯಾಂಕ್ ಆಫ್ ಮೈಸೂರು ವಿರುದ್ಧ ಶ್ರೀಮತಿ ಸರೋಜ ಶ್ರೀನಿವಾಸನ್ (ಐಎಲ್ಆರ್ 1997, KAR 2791) ಪ್ರಕರಣದಲ್ಲಿ ಈ ಕೆಳಕಂಡಂತೆ ಅಭಿಪ್ರಾಯ ಪಟ್ಟಿದೆ.

"If any money has been misappropriated by an employee who dies during the tendency of inquiry, we cannot say that monetary liability arises thereto cannot be determined even after the death of the delinquent employee, the employer should have the liberty to assess such financial liability which is to be recoverable out of the amounts due to the deceased employee on notice being given to the concerned heirs and i. e. the only way by which the proceedings can be concluded. The respondents must co-operate with the appellants in the enquiry to enable in establishing guilt or innocence of the deceased employee and the charge against him. On conclusion of such inquiry, though no action can be taken against the deceased, still his monetary liability can be determined. In taking such action, the appellant will have to take into consideration the question of amount misappropriated by the deceased employee, the time lapse between the date of misappropriation and the enquiry and the fact that the deceased employee is no longer available to defend himself and such other factors. If they come to the conclusion that still the proceedings should be continued to recover the amount from out of the amounts due to the said deceased employee, such steps will have to be taken. Otherwise any action taken by the appellants can be criticised as one done arbitrarily without applying the principles of natural justice. Therefore, we direct the respondents to inquire into the matter before making any deductions out of the Provident Fund, Gratuity or any other amounts due to the deceased employee appropriately one way or the other after issuing notice to the respondents. If a finding is recorded that there is any monetary, liability as far as the deceased employee is concerned, appropriate deductions can be made from the amounts payable to the respondents otherwise the amounts due to the deceased employee will have to be disbursed to the respondents."

4. ಸರ್ಕಾರಿ ನೌಕರರಿಂದ ಆರ್ಥಿಕ ನಷ್ಟ ಉಂಟಾಗಿದ್ದು, ಆ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಯುತ್ತಿದ್ದಾಗ, ಸರ್ಕಾರಿ ನೌಕರನು ಮರಣ ಹೊಂದಿದಾಗ ನ್ಯಾಯಾಲಯವು ಮೇಲೆ ಅಭಿಪ್ರಾಯಪಟ್ಟಂತೆ ಸಕ್ಷಮ ಶಿಸ್ತು ಪ್ರಾಧಿಕಾರಿಗಳು ಕ್ರಮವನ್ನು ಜರುಗಿಸತಕ್ಕದ್ದು.

5. ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು: ಕಾರ್ಯದರ್ಶಿಗಳು ಹಾಗೂ ಇಲಾಖಾ ಮುಖ್ಯಸ್ಥರು, ಮೇಲ್ಕಂಡ ಸೂಚನೆಗಳನ್ನು ಎಲ್ಲಾ ಸಕ್ಷಮ ಶಿಸ್ತು ಪ್ರಾಧಿಕಾರಿಗಳ ಗಮನಕ್ಕೆ ತರಬೇಕೆಂದು ಈ ಮೂಲಕ ಕೋರಲಾಗಿದೆ.

**ಎಚ್. ಆರ್. ನಾಗೇಂದ್ರ**

ಪಿ. ಆರ್. 1503

ಸರ್ಕಾರದ ಅಧೀನ ಕಾರ್ಯದರ್ಶಿ-2,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವಾ ನಿಯಮಗಳು).

## ಕನ್ನಡ ಮತ್ತು ಸಂಸ್ಕೃತಿ ಸಚಿವಾಲಯ

**ವಿಷಯ:** ರಾಷ್ಟ್ರಕವಿ ಕುವೆಂಪುರವರ ಜನ್ಮ ಶತಮಾನೋತ್ಸವ ವರ್ಷವನ್ನು **'ವಿಶ್ವಮಾನವ ವರ್ಷ'** ಎಂದು ಘೋಷಿಸುವ ಬಗ್ಗೆ.

**ಪ್ರಸ್ತಾವನೆ:**

ದಿನಾಂಕ: 29-12-2003ರಿಂದ 28-12-2004ರವರೆಗೆ ರಾಷ್ಟ್ರ ಕವಿ ಕುವೆಂಪುರವರ ಜನ್ಮ ಶತಮಾನೋತ್ಸವವನ್ನು ಆಚರಿಸುತ್ತಿದ್ದು ಈ ಅವಧಿಯನ್ನು **ವಿಶ್ವಮಾನವ ವರ್ಷ** ಎಂದು ಘೋಷಿಸಲು ಸರ್ಕಾರವು ನಿರ್ಧರಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಂಕ ಇ 167 ಕಸಧ 2003, ದಿನಾಂಕ: 20ನೇ ಸೆಪ್ಟೆಂಬರ್ 2003**

ರಾಷ್ಟ್ರಕವಿ ಕುವೆಂಪು ರವರ ಜನ್ಮ ಶತಮಾನೋತ್ಸವವನ್ನು ದಿ: 29-12-2003 ರಿಂದ 28-12-2004 ರವರೆಗೆ ಆಚರಿಸುತ್ತಿದ್ದು ಈ ಅವಧಿಯನ್ನು **ವಿಶ್ವಮಾನವ ವರ್ಷ** ಎಂದು ಘೋಷಿಸಿ ಸರ್ಕಾರವು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ. ಆರ್. 1504

**ಸಿ. ಎಸ್. ಕೇದಾರ್**

ಸರ್ಕಾರದ ಕಾರ್ಯದರ್ಶಿ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ.

## DEPARTMENT OF PARLIAMENTARY AFFAIRS AND LEGISLATION SECRETARIAT

**Sub :** The Youth Parliament competition conducted for the students studying in High Schools in the State of Karnataka (Amendment) Rules, 2003

**Read:** 1. G. O. No. DPAL 06 SAMVYAVI 97, Dated: 9-10-2000.
2. G. O. No. DPAL 150 ADM 2002, Dated: 11-11-2002.

**Preamble:**

In the Government Order dated: 9-10-2000, read at number (1) above, the Youth Parliament Competition conducted for the students studying In high schools in State of Karnataka Rules 1999, has been issued.

In the G. O. dated 11-11-2002 read at (2) above, suitable amendments are made to rule 12 and other rules in order to include the local MLAs in the panel judges of the District level and State Level Youth Parliament competition as recommended in the subject committee report for the year 2002-03 and The Youth Parliament competition conducted for the students studying in High Schools in the State of Karnataka (Amendments) Rules, 2002 is issued.

With the experience obtained during the competitions held in the previous years it is considered appropriated to provide for the participation of the four teams that have scored highest marks at the district level, in the State level competition and to select and award prizes to the first two best teams (winner and runner up). It is also considered appropriate to award individual merit prizes also for the best and the next best talents. Therefore it is intended to bring suitable amendments to the rules to incorporate these changes. Hence the order.

**Government Order No. DPAL 59 SAMVYA VI 2003, Dated: 28th October, 2003**

In the light of the reasons stated above amendments are made to the Youth Parliament competition conducted for the students studying in High Schools in the State of Karnataka rules, 1999, as shown in the annexure to this order.

By Order and in the name of the Governor of Karnataka,

**G. DAKSHINA MURTHY**

Secretary to Government,

Department of Parliamentary Affairs and Legislation.

**ANNEXURE**

**1. Short title and Commencement:-** (1) These rules may be called The Youth Parliament competition conducted for the students studying in High Schools in the State of Karnataka (Amendment) Rules, 2003.

(2) These rules shall come into force at once.

**2. Amendment of Rule 4:**- In rule 4 of the Youth Parliament Competition conducted for the students studying in High Schools in the State of Karnataka Rules, 1999 (herein after referred to as said rules).

(a) In sub rule (2) after the words "Required number of Participants" the words "after grouping them into taluk wise teams or as may be suitable into school wise teams subject to rule 6: shall be inserted.

(b) For sub rule (3) the following shall be substituted, namely:-

"(3) The team which has secured frist prize at the District level competition, in each district shall be eligible to participate at the state level."

**3. Amendment of Rule 6:**- In sub rule (2) of rule 6 of the said rules the words "of this, about thirty minutes may be devoted for questions" shall be omitted.

**4. Amendment of Rule 7:**- In rule 7 of the said rules for the words " Each institution" the words "Each team" shall be substituted.

**5. Amendment of Rule 11:**- In rule 11 of the said rules,- (a) in sub rule (1) after the words "Participation" the words" and two students who participated and exhibited best talent, at the district level, will be given individual merit prizes along with certificates" shall be inserted.

(b) For sub-rule (2) the following shall be substituted, namely:-

"(2)The teams that have secured First and Second places at the State level competition will be given shield and certificates while each participating students will be given a certificate at the prize distribution function of the state level competition."

(c) Sub rule (3) and (4) shall be omitted.

**6. Amendment to rule 12:**- After sub rule (2) to rule 12, of the said rules the following shall be added, namely:-

"(3)The decision given by the Committee of Judges shall not be held invalid merely by reason of the absence of any member of that committee".

**7. Amendment of rule 13:**- In rule 13 of the said rules, - (a) The rule 13 shall be renumbered as sub rule (1) thereof, In sub-rule (1) so renumbered, before the words "in the competition" the words "of the teams" shall be inserted and for the words "Keep in view the following points" the words "adopt the following criteria" shall be substituted.

(b) After sub rule (1) the following shall be added namely:-

"(2) The following criteria shall be adopted while assessing individual talent of the students in the competition:-

| | | **Marks** |
|---|---|---|
| 1. | Dress and style | 10 |
| 2. | Discipline and performance | 10 |
| 3. | Knowledge of business rules | 20 |
| 4. | Knowledge of subjects under debate | 30 |
| 5. | Language and expression | 20 |
| 6. | Creativity | 10 |
| | | **Total 100** |

**G. DAKSHINA MURTHY**

P. R. 1506

Secretary to Government,

Department of Parliamentary Affairs and Legislation.

## ಕೃಷಿ ಮತ್ತು ತೋಟಗಾರಿಕೆ ಸಚಿವಾಲಯ

**ವಿಷಯ:** 2003-04ನೇ ಸಾಲಿನಲ್ಲಿ ತೋಟಗಾರಿಕೆ ಇಲಾಖೆಯ ಯೋಜನಾಂಶ ಕಾರ್ಯಕ್ರಮಗಳಲ್ಲಿ ಮುಂದುವರೆಯುತ್ತಿರುವ ಯೋಜನೆಗಳಲ್ಲಿ ಹೆಚ್ಚುವರಿ/ ಹೊಸ ಘಟಕಗಳಿಗೆ ಮಂಜೂರಾತಿ ನೀಡುವ ಕುರಿತು.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ: ಎಹೆಚ್‌ಡಿ/ 133 /ಹೆಚ್‌ಪಿಪಿ 2003, ದಿ: 5-5-2003.

2. ತೋಟಗಾರಿಕೆ ನಿರ್ದೇಶನಾಲಯದ ಪತ್ರ ಸಂಖ್ಯೆ: ಹೆಚ್‌ಡಿ/ ಪಿಎಲ್‌ಎನ್/ ಎಹೆಚ್‌ಒ-1/ 13/ 2003-04, ದಿನಾಂಕ: 18-9-2003.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಸರ್ಕಾರದ ಆದೇಶದನ್ವಯ 2003-04ನೇ ಸಾಲಿಗೆ ತೋಟಗಾರಿಕೆ ಇಲಾಖೆಯಲ್ಲಿ ಯೋಜನಾಂಶದಲ್ಲಿ ಮುಂದುವರೆಯುತ್ತಿರುವ ಯೋಜನೆಗಳಿಗೆ ಮಂಜೂರಾತಿ ನೀಡಲಾಗಿತ್ತು.

ತೋಟಗಾರಿಕೆ ನಿರ್ದೇಶಕರು ಮೇಲೆ ಓದಲಾದ (2)ರ ಪತ್ರದಲ್ಲಿ 2003-04ನೇ ಸಾಲಿನಲ್ಲಿ ತೋಟಗಾರಿಕೆ ಇಲಾಖೆಯ ಯೋಜನಾಂಶದಲ್ಲಿ ಮುಂದುವರೆಯುತ್ತಿರುವ ಕಾರ್ಯಕ್ರಮಗಳಡಿ ಹೊಸ ಘಟಕಗಳನ್ನು ಪ್ರಸ್ತಾಪಿಸಿ ಸರ್ಕಾರದ ಮಂಜೂರಾತಿಯನ್ನು ಕೋರಿರುತ್ತಾರೆ. ಈ ಪ್ರಸ್ತಾವನೆಯ ಬಗ್ಗೆ ಆರ್ಥಿಕ ಇಲಾಖೆಯ ಅಪರ ಮುಖ್ಯ ಕಾರ್ಯದರ್ಶಿಗಳು ಹಾಗೂ ಪ್ರಧಾನ ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ದಿನಾಂಕ: 20-10-2003ರಂದು ನಡೆದ ಅಧಿಕಾರ ಯುಕ್ತ ಸಮಿತಿ ಸಭೆಯಲ್ಲಿ ಕೂಲಂಕುಷವಾಗಿ ಚರ್ಚಿಸಿ ಮಂಜೂರಾತಿ ನೀಡಬಹುದಾದ ಅಂಶಗಳ ಬಗ್ಗೆ ತೀರ್ಮಾನಿಸಿ ಆರ್ಥಿಕ ಇಲಾಖೆಯು ದಿನಾಂಕ: 6-11-2003ರಂದು ಟಿಪ್ಪಣಿ ಹೊರಡಿಸಿದೆ.

ಈ ಅನ್ವಯ ಕೆಳಕಾಣಿಸಿದಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಕೃತೋಇ 244 ತೋಯೋಕಾ 2003, ಬೆಂಗಳೂರು, ದಿನಾಂಕ: 25ನೇ ನವೆಂಬರ್ 2003**

ತೋಟಗಾರಿಕೆ ಇಲಾಖೆಯ ಯೋಜನಾಂಶ ಕಾರ್ಯಕ್ರಮದಡಿ 2003-04ನೇ ಸಾಲಿನಲ್ಲಿ ಮುಂದುವರೆಯುತ್ತಿರುವ ಯೋಜನೆಗಳಲ್ಲಿ ಕೆಳಕಾಣಿಸಿದ ಹೆಚ್ಚುವರಿ/ ಹೊಸ ಘಟಕಗಳನ್ನು ಸೇರ್ಪಡಿಸಲು ತೋಟಗಾರಿಕೆ ನಿರ್ದೇಶಕರಿಗೆ ಮಂಜೂರಾತಿಯನ್ನು ನೀಡಲಾಗಿದೆ.

(ಲಕ್ಷ ರೂ.ಗಳಲ್ಲಿ)

| ಯೋಜನೆ ಮತ್ತು ಲೆಕ್ಕಶೀರ್ಷಿಕೆ | ಕಾಂಪೊನೆಂಟ್ | ಯಂತ್ರ ಸಾಮಗ್ರಿ | ಭೌತಿಕ | ಆರ್ಥಿಕ |
|---|---|---|---|---|
| ನೂತನ ವಿಸ್ತೃತ ನಿರ್ವಹಣಾ ಮಾದರಿಯಡಿ ತೋಟಗಾರಿಕೆ ಅಭಿವೃದ್ಧಿ (2401-00-800-2-23) | 1. ಜೀವ ತಂತ್ರಜ್ಞಾನ ಕೇಂದ್ರದ ಅಭಿವೃದ್ಧಿ | ಆಟಾಮಿಕ್ ಅಬ್‌ಸಾರ್ಬಷನ್ ಸ್ಪೆಕ್ಟ್ರೋ ಫೋಟೋಮೀಟರ್ | 1 | 5.50 |
| | 2. ತರಬೇತಿ ಮತ್ತು ಪ್ರಚಾರ | ಡಿಜಿಟಲ್ ಕಾಪಿಯರ್<br>ಜೆರಾಕ್ಸ್ ಯಂತ್ರಗಳು | 1<br>2 | 5.00<br>2.00 |
| | 3. ವಾಣಿಜ್ಯ ಪುಷ್ಪಾಭಿವೃದ್ಧಿ | ಜೆರಾಕ್ಸ್ ಯಂತ್ರ | 1 | 1.00 |
| | | | ಒಟ್ಟು | 13.50 |

ಮೇಲಿನ ಯಂತ್ರ ಸಾಮಗ್ರಿಗಳನ್ನು ಕೆಳಕಾಣಿಸಿದ ನಿಬಂಧನೆಗಳನ್ನು ಪಾಲಿಸಿ ಖರೀದಿಸುವುದು.

1. ಯಾವುದೇ ಖರೀದಿಯನ್ನು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ನಿಯಮ 2000ದ ಅನ್ವಯ ಮಾಡತಕ್ಕದ್ದು.
2. ಯಾವುದೇ ಖರೀದಿಯು ಆಯಾ ಯೋಜನೆಯಡಿ ನಿಗದಿಗೊಳಿಸಲಾದ ಅನುದಾನಕ್ಕೆ ಸೀಮಿತವಾಗಿರತಕ್ಕದ್ದು. ಹೆಚ್ಚುವರಿ ಅನುದಾನ ಕೋರುವಂತಿಲ್ಲ.
3. ಅಗತ್ಯವಿರುವೆಡೆ ಕೃಷಿ ಮತ್ತು ತೋಟಗಾರಿಕೆ ಇಲಾಖೆಯ ತಾಂತ್ರಿಕ ಸಲಹಾ ಸಮಿತಿಯ (Technical advisory Panel) ಪೂರ್ವ ಅನುಮೋದನೆ ಪಡೆಯುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 912 ವೆಚ್ಚ -4/ 2003 ದಿನಾಂಕ: 6-11-2003ರಲ್ಲಿ ನೀಡಲಾದ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ. ಆರ್. 1507

**ಎನ್. ಮಂಜುಳಗೀತ**

ಸರ್ಕಾರದ ಅಧೀನ ಕಾರ್ಯದರ್ಶಿ, ಕೃಷಿ ಮತ್ತು ತೋಟಗಾರಿಕೆ ಇಲಾಖೆ.

## FINANCE SECRETARIAT

**Sub :** Austerity Measures for 2003-2004.

**Read:** 1. Government Order No.: FD 3 BEM 2001, dated: 17-10-2001.
2. Government Order No.: FD 2 BEM 2003, dated: 29-9-2003.

**Preamble:**

In the Economy Order dated: 29th September 2003, several austerity measures have been prescribed to conserve resources and exercise economy in non-plan expenditure to make more funds available for plan. These measures include among other things, a total ban on creation and filling up of posts both under plan and non-plan through direct recruitment and freezing of operation of object head "125-modernisation' for the remaining part of the financial year.

Now, the Government feels that there is necessity to relax these measures in respect of certain essential Department. Hence the Order.

**Government Order No. FD 02 BEM 2003, Bangalore, Dated: 19th November, 2003**

Government is pleased to exempt Home, Health and Family Welfare, Primary and Secondary Education and Excise Department from the ban on creation and filling up of posts both under Plan and Non-plan through direct recruitment. However, these Departments would continue to follow all the existing rules governing the filling up of posts through direct recruitment.

Government is also pleased to exempt the freezing of Modernization Funds in respect of Department receiving grants for up gradation of Administration and Modernization under Eleventh Finance Commission recommendations.

By Order and in the name of the Governor of Karnataka,

**T. P. NARASINGA RAO**

Under Secretary to Government, Finance Department (F.R. & C.C.).

## ಆರ್ಥಿಕ ಸಚಿವಾಲಯ

**ವಿಷಯ:** 2003-2004ನೇ ಸಾಲಿಗಾಗಿ ಮಿತವ್ಯಯ ಕ್ರಮಗಳು.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಆಇ 3 ಬಿಇಎಂ 2001, ದಿನಾಂಕ: 17-10-2001.
2. ಸರ್ಕಾರದ ಆದೇಶ ಸಂಖ್ಯೆ: ಆಇ 2 ಬಿಇಎಂ 2003, ದಿನಾಂಕ: 29-9-2003.

**ಪ್ರಸ್ತಾವನೆ:**

ದಿನಾಂಕ: 29ನೇ ಸೆಪ್ಟೆಂಬರ್ 2003 ಮಿತವ್ಯಯ ಆದೇಶದಲ್ಲಿ, ಸಂಪನ್ಮೂಲಗಳನ್ನು ಸಂರಕ್ಷಿಸಲು ಮತ್ತು ಯೋಜನೆಗೆ ಹೆಚ್ಚು ಹಣವನ್ನು ಒದಗಿಸಲು ಅನುಕೂಲವಾಗುವಂತೆ ಯೋಜನೆ ಮತ್ತು ಯೋಜನೇತರ ವೆಚ್ಚದಲ್ಲಿ ಮಿತವ್ಯಯ ಸಾಧಿಸಲು ಕೆಲವು ಮಿತವ್ಯಯ ಕ್ರಮಗಳನ್ನು ಗೊತ್ತುಮಾಡಲಾಗಿದೆ. ಇತರೆ ವಿಷಯಗಳನ್ನು ಒಳಗೊಂಡಂತೆ ಈ ಕ್ರಮಗಳು ನೇರ ನೇಮಕಾತಿ ಮೂಲಕ ಯೋಜನೆ ಮತ್ತು ಯೋಜನೇತರದ ಅಡಿಯಲ್ಲಿ ಹೊಸ ಹುದ್ದೆಗಳ ಸೃಜನೆ ಮತ್ತು ಭರ್ತಿ ಮಾಡುವುದನ್ನು ಪೂರ್ಣವಾಗಿ ನಿಷೇಧಿಸುವ ಮತ್ತು ಆರ್ಥಿಕ ವರ್ಷದ ಉಳಿದ ಭಾಗದಲ್ಲಿ ವಿವರಣಾ ಲೆಕ್ಕ ಶೀರ್ಷಿಕೆ-125-ಆಧುನೀಕರಣ ನಿರ್ವಹಣೆಯನ್ನು ಸ್ಥಗಿತಗೊಳಿಸುವ ಕ್ರಮವನ್ನು ಒಳಗೊಂಡಿರುತ್ತವೆ.

ಕೆಲವು ಪ್ರಮುಖ ಇಲಾಖೆಗಳಿಗೆ ಸಂಬಂಧಿಸಿದಂತೆ ಈ ಆರ್ಥಿಕ ಮಿತವ್ಯಯ ಕ್ರಮಗಳನ್ನು ಸಡಿಲಗೊಳಿಸುವ ಅವಶ್ಯಕತೆ ಇರುತ್ತದೆಯೆಂದು ಸರ್ಕಾರವು ಭಾವಿಸುತ್ತದೆ. ಆದ್ದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಆಇ 2 ಬಿಇಎಂ 2003, ಬೆಂಗಳೂರು, ದಿನಾಂಕ: 19ನೇ ನವೆಂಬರ್ 2003**

ಒಳಾಡಳಿತ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ, ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಮತ್ತು ಅಬಕಾರಿ ಇಲಾಖೆಗಳಿಗೆ ನೇರ ನೇಮಕಾತಿ ಮೂಲಕ ಯೋಜನೆ ಮತ್ತು ಯೋಜನೇತರ ಅಡಿಯಲ್ಲಿ ಹೊಸ ಹುದ್ದೆಗಳ ಸೃಜನೆ ಮತ್ತು ಭರ್ತಿ ಮಾಡುವುದಕ್ಕೆ ಇರುವ ಪ್ರತಿಬಂಧದಿಂದ ವಿನಾಯಿತಿ ನೀಡಲು ಸರ್ಕಾರವು ಒಪ್ಪಿದೆ. ಆದಾಗ್ಯೂ ಈ ಇಲಾಖೆಗಳು ನೇರ ನೇಮಕಾತಿ ಮೂಲಕ ಹುದ್ದೆಗಳನ್ನು ತುಂಬುವಾಗ ಅಸ್ತಿತ್ವದಲ್ಲಿರುವ ಎಲ್ಲಾ ನಿಯಮಗಳನ್ನು ಪಾಲಿಸಬೇಕು.

ಹನ್ನೊಂದನೇ ಆರ್ಥಿಕ ಆಯೋಗದ ಶಿಫಾರಸ್ಸಿನಂತೆ ಆಡಳಿತ ಉನ್ನತೀಕರಣ ಮತ್ತು ಆಧುನೀಕರಣಕ್ಕಾಗಿ ಅನುದಾನವನ್ನು ಪಡೆಯುತ್ತಿರುವ ಇಲಾಖೆಗಳ ಆಧುನೀಕರಣ ನಿಧಿಯ ಸ್ಥಗಿತಕ್ಕೂ ಸಹ ಆರ್ಥಿಕ ಮಿತವ್ಯಯ ಕ್ರಮಗಳಿಂದ ವಿನಾಯಿತಿ ನೀಡಲು ಸರ್ಕಾರವು ಒಪ್ಪಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ. ಆರ್. 1508

**ಟಿ. ಪಿ. ನರಸಿಂಗ ರಾವ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರ್ಥಿಕ ಇಲಾಖೆ (ವಿತ್ತೀಯ ಸುಧಾರಣಾ ಮತ್ತು ಗಣಕ ಕೋಶ).

## ನಗರಾಭಿವೃದ್ಧಿ ಸಚಿವಾಲಯ

**ವಿಷಯ:** ಮೈಸೂರು ನಗರದ ವಸಂತನಗರ ಬಡಾವಣೆಯನ್ನು ಆಲನಹಳ್ಳಿ-ನಾಡನಹಳ್ಳಿ ಯೋಜನೆಗೆ ಮಂಜೂರಾತಿ ನೀಡುವ ಬಗ್ಗೆ

**ಓದಲಾಗಿದೆ:** 1. ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರದ ಪತ್ರ ಸಂಖ್ಯೆ: ಸಕಅನಂ: 3: ಪಿಆರ್: 66: 2002-03, ದಿನಾಂಕ: 13-2-03.

2. ಪತ್ರ ಸಂ. ಎಇಇ: 4: ಪಿಆರ್: 62 : 2000-01 ದಿನಾಂಕ: 28-8-2002.

**ಪ್ರಸ್ತಾವನೆ:**

ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರವು ಆಲನಹಳ್ಳಿ-ನಾಡನಹಳ್ಳಿ 2ನೇ ಹಂತಕ್ಕೆ ಹೊಂದಿಕೊಂಡಂತೆ ಆಲನಹಳ್ಳಿ-ನಾಡನಹಳ್ಳಿ ಗ್ರಾಮದ ಜಮೀನುಗಳನ್ನು ಎ.ಡಿ.ಬಿ. ನೆರವಿನ ಯೋಜನೆಯಡಿ ಭೂ ಸ್ವಾಧೀನ ಪಡಿಸಿಕೊಳ್ಳಲು ದಿನಾಂಕ: 7-12-96ರಲ್ಲಿ ಪ್ರಾಧಿಕಾರವು ತೀರ್ಮಾನ ತೆಗೆದುಕೊಂಡು ಸರ್ಕಾರದ ಮಂಜೂರಾತಿಯನ್ನು ದಿನಾಂಕ: 30-1-97ರಲ್ಲಿ ಪಡೆದಿದೆ. ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರವು ಸದರಿ ಯೋಜನೆಯನ್ನು ಎ.ಡಿ.ಬಿ. ಯ ಆರ್ಥಿಕ ಸಹಾಯದಲ್ಲಿ ಅಭಿವೃದ್ಧಿಪಡಿಸುವ ಉದ್ದೇಶವನ್ನು ಕೈಬಿಟ್ಟು ಪ್ರಾಧಿಕಾರದ ವತಿಯಿಂದ ವೆಚ್ಚ ಭರಿಸಿ ಬಡಾವಣೆಯನ್ನು ಅಭಿವೃದ್ಧಿಪಡಿಸಲು ನಿರ್ಧರಿಸಲಾಗಿದೆ. ನಾಡನಹಳ್ಳಿ ಗ್ರಾಮದ 127.91 ಹೆಕ್ಟರ್ ಪ್ರದೇಶದಲ್ಲಿ ಅಂದಾಜು ರೂ. 4,700.00 ಲಕ್ಷಗಳ ವೆಚ್ಚದಲ್ಲಿ ಅಭಿವೃದ್ಧಿಪಡಿಸಿ ಒಟ್ಟು 3525 ನಿವೇಶನಗಳನ್ನು ವಿತರಿಸುವ ಸಂಬಂಧ ಯೋಜನೆಯನ್ನು ಕಾರ್ಯಗತಗೊಳಿಸಲು ನಾಡನಹಳ್ಳಿ ಗ್ರಾಮದ ಯೋಜನೆಯನ್ನು ಪ್ರಾರಂಭಿಕವಾಗಿ ಯೋಜನೆಯ ವೆಚ್ಚವನ್ನು ಪ್ರಾಧಿಕಾರದಲ್ಲಿ ಲಭ್ಯವಿರುವ ಹಣದಿಂದ ಹಾಗೂ ಹಣಕಾಸು ಸಂಸ್ಥೆಗಳಿಂದ ಸಾಲ ಪಡೆಯುವ ಮೂಲಕ ಪ್ರಾಧಿಕಾರವು ಭರಿಸುತ್ತದೆ. ಆದ್ದರಿಂದ ಕರ್ನಾಟಕ ನಗರಾಭಿವೃದ್ಧಿ ಪ್ರಾಧಿಕಾರ ಕಾಯ್ದೆ 1987 ರ ಅಧಿನಿಯಮ 18 (3) ಸರ್ಕಾರದ ಆಡಳಿತಾತ್ಮಕ ಅನುಮೋದನೆಯ ಬಗ್ಗೆ ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 235 ಮೈಅಪ್ರಾ 02, ಬೆಂಗಳೂರು, ದಿನಾಂಕ: 30ನೇ ಅಕ್ಟೋಬರ್, 2003**

ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರವು ಆಲನಹಳ್ಳಿ-ನಾಡನಹಳ್ಳಿ 2ನೇ ಹಂತಕ್ಕೆ ಹೊಂದಿಕೊಂಡಂತೆ ಆಲನಹಳ್ಳಿ- ನಾಡನಹಳ್ಳಿ ಗ್ರಾಮದ 127.97 ಹೆಕ್ಟರ್ ಪ್ರದೇಶದಲ್ಲಿ ಅಂದಾಜು ರೂ. 4,700.00 ಲಕ್ಷಗಳ ವೆಚ್ಚದಲ್ಲಿ ಅಭಿವೃದ್ಧಿಪಡಿಸಿ ಒಟ್ಟು 3525 ನಿವೇಶನಗಳನ್ನು ವಿತರಿಸುವ ಸಂಬಂಧ ಈ ಕೆಳಕಂಡ ಷರತ್ತಿಗೊಳಪಟ್ಟು ಕರ್ನಾಟಕ ನಗರಾಭಿವೃದ್ಧಿ ಪ್ರಾಧಿಕಾರ ಕಾಯ್ದೆ 1987 ರ ಅಧಿನಿಯಮ 18 (3) ರಂತೆ ಆಡಳಿತಾತ್ಮಕ ಅನುಮೋದನೆಯನ್ನು ನೀಡಲಾಗಿದೆ.

1. ಈ ಯೋಜನೆಯನ್ನು ಎರಡು ವರ್ಷಗಳ ಕಾಲಮಿತಿಯೊಳಗೆ ಅಭಿವೃದ್ಧಿಪಡಿಸಿ ನಿವೇಶನಗಳನ್ನು ವಿತರಿಸತಕ್ಕದ್ದು.
2. 12 ಮೀ. ಕ್ಕಿಂತ ಹೆಚ್ಚಿನ ಅಗಲದ ರಸ್ತೆಗಳಿಗೆ ಪಾದಚಾರಿ ಮಾರ್ಗ (Foot Path) ವನ್ನು ಕಡ್ಡಾಯವಾಗಿ ನಿರ್ಮಿಸತಕ್ಕದ್ದು.
3. ಸದರಿ ವಿನ್ಯಾಸದ ಒಳಚರಂಡಿ ನೀರನ್ನು ಪ್ರಮಾಣೀಕರಿಸಿದ ಮಟ್ಟದಲ್ಲಿ ಶುದ್ಧೀಕರಣವನ್ನು ಮಾಡತಕ್ಕದ್ದು.
4. ಸರ್ಕಾರದ ಯಾವುದೇ ಆರ್ಥಿಕ ಸಹಾಯ/ ಖಾತರಿಯನ್ನು ನಿರೀಕ್ಷಿಸದೇ ಯೋಜನೆಯ ಪೂರ್ಣ ವೆಚ್ಚವನ್ನು ಪ್ರಾಧಿಕಾರವೇ ಭರಿಸತಕ್ಕದ್ದು.
5. ಈ ಯೋಜನೆಯಲ್ಲಿ ಒಳಗೊಂಡಿರುವ ಕಾಮಗಾರಿಗಳಾದ ಬಡಾವಣೆ ನಿರ್ಮಾಣ, ಒಳಚರಂಡಿ, ನೀರು ಸರಬರಾಜು ವ್ಯವಸ್ಥೆ, ವಿದ್ಯುದೀಕರಣ ಮತ್ತಿತರ ಎಲ್ಲಾ ಕಾಮಗಾರಿಗಳನ್ನು ಕೈಗೊಳ್ಳುವ ಸಂದರ್ಭದಲ್ಲಿ ಕರ್ನಾಟಕ ಪಾರದರ್ಶಕ ಕಾಯ್ದೆ 2000 ರಲ್ಲಿನ ಆದೇಶಗಳನ್ನು ಕಡ್ಡಾಯವಾಗಿ ಪಾಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ. ಆರ್. 1509

**ವಿ. ಶ್ರೀಧರಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ನಗರಾಭಿವೃದ್ಧಿ ಇಲಾಖೆ.

## ಕಾರ್ಮಿಕ ಸಚಿವಾಲಯ

**ವಿಷಯ:** ಶ್ರೀ ಆರ್. ಫಯಾಜ್ ಅಹಮ್ಮದ್, ನಿವೃತ್ತ ಸಹಾಯಕ ಉದ್ಯೋಗಾಧಿಕಾರಿ, ಉಪ ಪ್ರಾದೇಶಿಕ ಉದ್ಯೋಗ ವಿನಿಮಯ ಕೇಂದ್ರ, ಬೆಂಗಳೂರು ಇವರ ವಿರುದ್ಧ ಮಾಡಲಾದ ದೂರಿನ ಬಗ್ಗೆ ಇಲಾಖಾ ವಿಚಾರಣೆ.

**ಓದಲಾಗಿದೆ:**
1. ನಿಬಂಧಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಅವರ ಅರೆ ಸರ್ಕಾರಿ ಪತ್ರ ಸಂಖ್ಯೆ: ಕಂಪ್ಲೆಂಟ್: ಉಪ ಲೋಕ್: ಡಿಡಿ-136: 99-2000: ಡಿಆರ್‌ಇ-4 : ದಿನಾಂಕ: 26-03-2001.
2. ಸರ್ಕಾರಿ ಆದೇಶ ಸಂಖ್ಯೆ: ಕಾಇ 16 ಇಟಿಎಕ್ಸ್ 2001, ದಿನಾಂಕ: 8-10-2001.
3. ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಅವರ ಪತ್ರ ಸಂಖ್ಯೆ: ಲೋಕ್: ಎಆರ್‌ಇ-3: ವಿಚಾರಣೆ-31: 2002-03, ದಿನಾಂಕ: 18-10-2002.

**ಪ್ರಸ್ತಾವನೆ:**

ನಿಬಂಧಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಅವರ ಪತ್ರ ದಿನಾಂಕ: 26-3-2001 (ಓದಲಾಗಿದೆ ಕ್ರಮಸಂಖ್ಯೆ: 1)ರಲ್ಲಿ ಶ್ರೀ ಆರ್. ಫಯಾಜ್ ಅಹಮ್ಮದ್, ಹಿಂದಿನ ಗುಮಾಸ್ತರು, ಉದ್ಯೋಗ ವಿನಿಮಯ ಕೇಂದ್ರ, ಕೋಲಾರ ಜಿಲ್ಲೆ ಹಾಲಿ ಸಹಾಯಕ ಉದ್ಯೋಗಾಧಿಕಾರಿ, ಉಪ ಪ್ರಾದೇಶಿಕ ಉದ್ಯೋಗ ವಿನಿಮಯ ಕಚೇರಿ, ಸುಬ್ಬಯ್ಯ ವೃತ್ತ, ಬೆಂಗಳೂರು ಇವರ ವಿರುದ್ಧ ಸಲ್ಲಿಸಿದ ದೂರಿನಲ್ಲಿ ಫಿರ್ಯಾದುದಾರರಾದ ಬಂಗಾರುಪೇಟೆ ತಾಲ್ಲೂಕಿನ ಚನ್ನಹಂಡ್ಲ ಗ್ರಾಮದ ವಾಸಿಯಾದ ಲೂರ್ದರಾಜ್ ಇವರಿಗೆ ಉದ್ಯೋಗ ವಿನಿಮಯ ಕಾರ್ಡನ್ನು ನವೀಕರಿಸದೆ ರದ್ದಾಗಿದ್ದ ಕಾರ್ಡನ್ನು ನವೀಕರಿಸುವ ಬಗ್ಗೆ ಒಪ್ಪಿ ಮತ್ತು ಚಾಲಕ ಹುದ್ದೆಯನ್ನು ಕೊಡಿಸುವುದಾಗಿ ವಂಚಿಸಿ ರೂ. 10,000-00 (ರೂಪಾಯಿ ಹತ್ತು ಸಾವಿರ ಮಾತ್ರ) ಗಳನ್ನು ತನಿಖೆಯಿಂದ ಮೇಲ್ನೋಟಕ್ಕೆ ಸಾಬೀತಾಗಿರುವುದು ಕಂಡುಬರುತ್ತದೆ. ಆದುದರಿಂದ ಶ್ರೀ ಆರ್. ಫಯಾಜ್ ಅಹಮ್ಮದ್, ಸಹಾಯಕ ಉದ್ಯೋಗಾಧಿಕಾರಿ, ಉಪ ಪ್ರಾದೇಶಿಕ ವಿನಿಮಯ ಕಚೇರಿ, ಬೆಂಗಳೂರು ಇವರ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮ 1957ರ 11 ಮತ್ತು 11-ಎ ನಿಯಮಗಳಡಿಯಲ್ಲಿ ಇಲಾಖಾ ವಿಚಾರಣೆ ಜರುಗಿಸಲು ಈ ಪ್ರಕರಣವನ್ನು ಇದೇ ನಿಯಮಾವಳಿಯ ನಿಯಮ 14-ಎ ರಡಿಯಲ್ಲಿ ಮಾನ್ಯ ಉಪ ಲೋಕಾಯುಕ್ತ, ಬೆಂಗಳೂರುರವರು ಕೋರಿದ್ದರು.

ಸರ್ಕಾರಿ ಆದೇಶ ಸಂಖ್ಯೆ: ಕಾಇ 16 ಇಟಿಎಕ್ಸ್ 2001, ದಿನಾಂಕ: 08-10-2001 (ಓದಲಾಗಿದೆ ಕ್ರಮಸಂಖ್ಯೆ 2)ರಲ್ಲಿ ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 14-ಎ ರನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಆರ್. ಫಯಾಜ್ ಅಹಮ್ಮದ್, ಸಹಾಯಕ ಉದ್ಯೋಗಾಧಿಕಾರಿ, ಉಪ ಪ್ರಾದೇಶಿಕ ಉದ್ಯೋಗ ವಿನಿಮಯ ಕೇಂದ್ರ, ಬೆಂಗಳೂರು, ಇವರ ವಿರುದ್ಧ ಸದರಿ ನಿಯಮಾವಳಿಯ ನಿಯಮ 11 ರನ್ವಯ ಇಲಾಖಾ ವಿಚಾರಣೆ ಜರುಗಿಸಿ ವರದಿ ನೀಡಲು ಈ ಪ್ರಕರಣವನ್ನು ಮಾನ್ಯ ಉಪಲೋಕಾಯುಕ್ತರು, ಬೆಂಗಳೂರು ಇವರಿಗೆ ವಹಿಸಿಕೊಡಲು ಆದೇಶಿಸಿದೆ.

ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರು ದಿನಾಂಕ: 18-10-2002 (ಓದಲಾಗಿದೆ ಕ್ರಮ ಸಂಖ್ಯೆ. 3)ರಲ್ಲಿ ಅಪರ ನಿಬಂಧಕರು, ವಿಚಾರಣೆ -3, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಸರ್ಕಾರಿ ಆದೇಶದನ್ವಯ ವಿಚಾರಣೆ ಮಾಡಲಾಗಿದೆ ಮತ್ತು ವಿಚಾರಣಾ ವರದಿಯಲ್ಲಿ ಶ್ರೀ ಆರ್. ಫಯಾಜ್ ಅಹಮ್ಮದ್, ಸಹಾಯಕ ಉದ್ಯೋಗಾಧಿಕಾರಿ, ಅವರು ಶ್ರೀ ಲೂರ್ಧರಾಜ್, ದೂರುದಾರರಿಂದ ಉದ್ಯೋಗ ವಿನಿಮಯ ಕಾರ್ಡನ್ನು ನವೀಕರಿಸಲು ಮತ್ತು ಡೂಪ್ಲಿಕೇಟ್ ಉದ್ಯೋಗ ವಿನಿಮಯ ಕಾರ್ಡನ್ನು ನೀಡಿರುವುದು ಹಾಗೂ ಮೂಲ ರಿಜಿಸ್ಟಾರ್ (Original Register) ಪುಸ್ತಕ ಸಂಖ್ಯೆ: 98 ರಲ್ಲಿ ಪುಟ 137ನ್ನು ನಾಶಪಡಿಸಿ ದೂರುದಾರರ ಉದ್ಯೋಗ ವಿನಿಮಯ ಕಾರ್ಡಿನಲ್ಲಿ ನಮೂದಿಸಿರುವುದು ಸಾಬೀತಾಗಿರುವುದರಿಂದ ಕರ್ನಾಟಕ ನಾಗರೀಕ ಸೇವಾ ನಿಯಮ 214 (1) (ಎ)ರ ಪ್ರಕಾರ ಆಪಾದಿತ ಅಧಿಕಾರಿಯ ನಿವೃತ್ತಿ ವೇತನದಲ್ಲಿ ಶೇ. 50 ಭಾಗವನ್ನು ಖಾಯಂ ಆಗಿ ಹಿಂದಕ್ಕೆ ಪಡೆಯಲು ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕುಷವಾಗಿ ಪರಿಶೀಲಿಸಿದೆ ಆದುದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಕಾಇ 16 ಇಟಿಎಕ್ಸ್ 2001, ಬೆಂಗಳೂರು, ದಿನಾಂಕ: 27ನೇ ನವೆಂಬರ್ 2003**

ಮೇಲೆ ತಿಳಿಸಿರುವ ವಿವರದ ಹಿನ್ನೆಲೆಯಲ್ಲಿ ಕರ್ನಾಟಕ ನಾಗರೀಕ ಸೇವಾ ನಿಯಮ 214 (1) (ಎ) ರ ಪ್ರಕಾರ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಆರ್. ಫಯಾಜ್ ಅಹಮ್ಮದ್, ನಿವೃತ್ತ ಸಹಾಯಕ ಉದ್ಯೋಗಾಧಿಕಾರಿ, ಉಪ ಪ್ರಾದೇಶಿಕ ಉದ್ಯೋಗ ವಿನಿಮಯ ಕೇಂದ್ರ, ಬೆಂಗಳೂರು, ಇವರ ನಿವೃತ್ತಿ ವೇತನದಿಂದ ಶೇ. 50 ಭಾಗವನ್ನು ಖಾಯಂ ಆಗಿ ತಕ್ಷಣದಿಂದ ಜಾರಿಗೆ ಬರುವಂತೆ ಹಿಂತೆಗೆದುಕೊಳ್ಳುವ (withdrawing pumenent) ದಂಡನೆಯನ್ನು ವಿಧಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ. ಆರ್. 1510

**ಎನ್. ಸುಬ್ರಮಣ್ಯರಾವ್**

ಪೀಠಾಧಿಕಾರಿ, ಕಾರ್ಮಿಕ ಇಲಾಖೆ (ಉದ್ಯೋಗ ಮತ್ತು ತರಬೇತಿ).

## ಸಹಕಾರ ಸಚಿವಾಲಯ

### ಅಧಿಸೂಚನೆ ಸಂಖ್ಯೆ: ಸಇ 209 ಎಸಸೇ 2003, ಬೆಂಗಳೂರು, ದಿನಾಂಕ: 24ನೇ ನವೆಂಬರ್ 2003

ಶ್ರೀ ಟಿ. ಎಂ. ರಾಮರೆಡ್ಡಿ, ಸಹಕಾರ ಸಂಘಗಳ ಸಹಾಯಕ ನಿಬಂಧಕರು, (ನಿವೃತ್ತ) ರವರು ದಿನಾಂಕ: 4-6-1960 ರಂದು ಸಹಕಾರ ಇಲಾಖೆಯಲ್ಲಿ ಸಹಕಾರ ವಿಸ್ತರಣಾಧಿಕಾರಿಯಾಗಿ ಸೇವೆಗೆ ಸೇರಿರುತ್ತಾರೆ.

ಸರ್ಕಾರಿ ಅಧಿಸೂಚನೆ ಸಂಖ್ಯೆ: ಆರ್‌ಡಿಸಿ 59 ಸಿಇಎಂ 80, ದಿನಾಂಕ: 09-7-1980 ರಲ್ಲಿ ಶ್ರೀ ಟಿ. ಎಂ. ರಾಮರೆಡ್ಡಿ ರವರು ದಿನಾಂಕ: 14-03-1980 ರಿಂದ ಜಾರಿಗೆ ಬರುವಂತೆ ಸಹಕಾರ ಸಂಘಗಳ ಸಹಾಯಕ ನಿಬಂಧಕರಾಗಿ ಮುಂಬಡ್ತಿ ಹೊಂದಿರುತ್ತಾರೆ. ಅದರಲ್ಲಿ ಇವರ ಹೆಸರು ಶ್ರೀ ಎನ್. ಕೃಷ್ಣೋಜಿರಾವ್ ಮತ್ತು ಶ್ರೀ ಜಿ. ವೈ. ಚಂದ್ರಶೇಖರಪ್ಪ ರವರ ನಡುವೆ ಇರುತ್ತದೆ.

ಸರ್ಕಾರಿ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ 20 ಸೀಎಂ 99, ದಿನಾಂಕ: 20-3-2000ರಲ್ಲಿ ಸಹಕಾರ ಅಭಿವೃದ್ಧಿ ಅಧಿಕಾರಿ ವೃಂದದ ಅಧಿಕಾರಿಗಳ ದಿನಾಂಕ: 28-6-1961 ರಿಂದ 31-12-1998 ರವರೆಗಿನ ಅವಧಿಯ ಬಡ್ತಿಗಳ ಪುನರಾವಲೋಕನಾ ಹಾಗೂ ಅಂತಿಮ ಜೇಷ್ಠತಾ ಪಟ್ಟಿಯನ್ನು ಪ್ರಕಟಿಸಲಾಗಿದೆ. ಅದರಂತೆ ಜೇಷ್ಠತಾ ಸಂಖ್ಯೆ: 527ರ ಶ್ರೀ ಟಿ. ಎಂ. ರಾಮರೆಡ್ಡಿ ರವರ ಹೆಸರು ಜೇಷ್ಠತಾ ಸಂಖ್ಯೆ: 526ರ ಶ್ರೀ ಡಿ. ಆರ್. ಶಂಕರಾಜಪ್ಪ ಮತ್ತು 528ರ ಶ್ರೀ ಜಿ. ವೈ. ಚಂದ್ರಶೇಖರಪ್ಪರವರ ಹೆಸರುಗಳ ನಡುವೆ ಇರುತ್ತದೆ.

ಸರ್ಕಾರಿ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ 4 ಸೀಎಂ 96, ದಿನಾಂಕ: 30-3-1996ರಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರ ವೃಂದದ ಅಧಿಕಾರಿಗಳ ದಿನಾಂಕ: 01-11-1956 ರಿಂದ 30-06-1995ರವರೆಗಿನ ಅಂತಿಮ ಪುನರಾವಲೋಕನಾ ಹಾಗೂ ಜೇಷ್ಠತಾ ಪಟ್ಟಿಯನ್ನು ಪ್ರಕಟಿಸಲಾಗಿದೆ. ಆದರೆ, ಆ ಪಟ್ಟಿಯಲ್ಲಿ ಜೇಷ್ಠತಾ ಸಂಖ್ಯೆ: 653ರ ಶ್ರೀ ಎನ್. ಕೃಷ್ಣೋಜಿರಾವ್ ಮತ್ತು 655 ರ ಶ್ರೀ ಕೆ. ಸಿ. ನಂಜೇಗೌಡ ರವರ ಹೆಸರುಗಳ ಮಧ್ಯೆ ಶ್ರೀ ಟಿ. ಎಂ. ರಾಮರೆಡ್ಡಿ ರವರ ಹೆಸರು ಬಿಟ್ಟುಹೋಗಿರುತ್ತದೆ.

ಶ್ರೀ ಟಿ. ಎಂ. ರಾಮರೆಡ್ಡಿ, ಸಹಕಾರ ಸಂಘಗಳ ಸಹಾಯಕ ನಿಬಂಧಕರು (ನಿವೃತ್ತ) ರವರು ಕರ್ನಾಟಕ ಆಡಳಿತ ನ್ಯಾಯಮಂಡಳಿಯಲ್ಲಿ ಸಲ್ಲಿಸಿದ್ದ ಅರ್ಜಿ ಸಂಖ್ಯೆ: 12930/ 2002ರ ಮೇಲಿನ ದಿನಾಂಕ: 20-9-2002ರ ತೀರ್ಪಿನಲ್ಲಿ ಅರ್ಜಿದಾರರು ಕಾಲಬದ್ಧ ಮುಂಬಡ್ತಿಗೆ ಅರ್ಹರಿದ್ದಲ್ಲಿ ನಿಯಮಾನುಸಾರ ಮಂಜೂರು ಮಾಡುವ ಆದೇಶವನ್ನು 90 ದಿನಗಳೊಳಗಾಗಿ ಹೊರಡಿಸುವಂತೆ ಆದೇಶಿಸಿದೆ.

ಆದ್ದರಿಂದ, ಶ್ರೀ ಟಿ. ಎಂ. ರಾಮರೆಡ್ಡಿ, ಸಹಕಾರ ಸಂಘಗಳ ಸಹಾಯಕ ನಿಬಂಧಕರು (ನಿವೃತ್ತ) ರವರ ಹೆಸರನ್ನು ದಿನಾಂಕ: 01-11-1986 ರಿಂದ 30-6-1995 ರವರೆಗಿನ ಸಹಕಾರ ಸಂಘಗಳ ಸಹಾಯಕ ನಿಬಂಧಕರ ವೃಂದದ ಅಂತಿಮ ಪುನರಾವಲೋಕನಾ ಹಾಗೂ ಅಂತಿಮ ಜೇಷ್ಠತಾ ಪಟ್ಟಿಯಲ್ಲಿ ಜೇಷ್ಠತಾ ಸಂಖ್ಯೆ: 653ರ ಶ್ರೀ ಎನ್. ಕೃಷ್ಣೋಜಿರಾವ್ ಮತ್ತು 655 ರ ಶ್ರೀ ಕೆ. ಸಿ. ನಂಜೇಗೌಡ ರವರ ಹೆಸರುಗಳ ನಡುವೆ ಸೇರಿಸುವುದು ಅವಶ್ಯವಿರುತ್ತದೆ.

ಆದ್ದರಿಂದ, ಸರ್ಕಾರಿ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ 4 ಸೀಎಂ 96, ದಿನಾಂಕ: 30-03-1996 ರ ಸಹಕಾರ ಸಂಘಗಳ ಸಹಾಯಕ ನಿಬಂಧಕರ ವೃಂದದ ಅಂತಿಮ ಪುನರಾವಲೋಕನಾ ಹಾಗೂ ಜೇಷ್ಠತಾ ಪಟ್ಟಿಯಲ್ಲಿ ಶ್ರೀ ಟಿ. ಎಂ. ರಾಮರೆಡ್ಡಿರವರ ಹೆಸರನ್ನು ಈ ಕೆಳಕಂಡಂತೆ ಸೇರಿಸಿ ಪ್ರಕಟಿಸಲಾಗಿದೆ.

| ಕ್ರ.ಸಂ | ಅಧಿಕಾರಿಯ ಹೆಸರು | ನೇರ ನೇಮಕಾತಿ/ ಪದೋನ್ನತಿ ಪಡೆದ ಅಧಿಕಾರಿ | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ಪದೋನ್ನತಿ ಪಡೆದ/ ನೇರ ನೇಮಕಾತಿ ಹೊಂದಿದ ದಿನಾಂಕ | ಅರ್ಹತಾ/ ನೇರ ನೇಮಕಾತಿ ಹೊಂದಿದ ದಿನಾಂಕ | ಷರಾ |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 654-ಎ | ಟಿ. ಎಂ. ರಾಮರೆಡ್ಡಿ | ಪದೋನ್ನತಿ | 10-7-33 | 04-6-60 | 11-3-79 | 1-3-90 | - |

ಆದ್ದರಿಂದ, ಈ ಬಗ್ಗೆ ಯಾರೇ ವ್ಯಕ್ತಿಗಳು ಬಾಧಿತರಾಗಿದ್ದಲ್ಲಿ ತಮ್ಮ ಆಕ್ಷೇಪಣೆಗಳನ್ನು ಲಿಖಿತ ರೂಪದಲ್ಲಿ ಈ ಅಧಿಸೂಚನೆ ದಿನಾಂಕದಿಂದ 15 ದಿನಗಳೊಳಗಾಗಿ ಸರ್ಕಾರಕ್ಕೆ ಸಲ್ಲಿಸಬಹುದೆಂದು ಸೂಚಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ. ಆರ್. 1511 **ಬಿ. ಎಸ್. ಜಾಪಾಲಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಸಹಕಾರ ಇಲಾಖೆ.

## ಆರ್ಥಿಕ ಸಚಿವಾಲಯ

## ಅಧಿಸೂಚನೆ ಸಂಖ್ಯೆ: ಆಇ 101 ವಾತೆಸಿ 2003, ಬೆಂಗಳೂರು, ದಿನಾಂಕ: 21ನೇ ನವೆಂಬರ್ 2003

ಕರ್ನಾಟಕ ರಾಜ್ಯ ನಾಗರೀಕ ಸೇವೆಗಳು (ಪ. ಜಾ./ಪ. ಪಂ ಸೇರಿದ ವ್ಯಕ್ತಿಗಳಿಗೆ ಮೀಸಲಿರಿಸಿದ ತುಂಬದೆ ಇರುವ ಸ್ಥಾನಗಳು) ವಿಶೇಷ ನೇಮಕಾತಿ) ನಿಯಮಗಳು 2001ರಡಿ ಕರ್ನಾಟಕ ಲೋಕಸೇವಾ ಆಯೋಗದಿಂದ ವಾಣಿಜ್ಯ ತೆರಿಗೆ ಇಲಾಖೆಯ ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರ ಬ್ಯಾಕ್‌ಲಾಗ್ ಹುದ್ದೆಗೆ ಆಯ್ಕೆಯಾದ ಶ್ರೀ ಮೇಘಣ್ಣವರ್ ರೇಣೇಶ್ವರ ಡಿ. ರವರಿಗೆ ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರಾಗಿ (ವೇತನ ಶ್ರೇಣಿ ರೂ. 7400-13120) ನೇಮಕಾತಿ ಆದೇಶವನ್ನು ಈ ಕೆಳಕಂಡ ಷರತ್ತಿಗೆ ಒಳಪಟ್ಟು ನೀಡಲಾಗಿದೆ.

ಅ. ಇವರು ಎರಡು ವರ್ಷದ ಅವಧಿಗೆ ಪರಿವೀಕ್ಷಣಾ ಅವಧಿ (Prob.) ಮೇಲೆ ಇರುತ್ತಾರೆ.

ಆ. ಈ ಎರಡು ವರ್ಷದ ಅವಧಿಯೊಳಗೆ 1974ರ ಕರ್ನಾಟಕ ನಾಗರೀಕ ಸೇವಾ (ಸೇವೆ ಮತ್ತು ಕನ್ನಡ ಭಾಷಾ ಪರೀಕ್ಷೆಗಳು) ನಿಯಮಗಳಲ್ಲಿ ನಿಗದಿಪಡಿಸಿರುವ ನಿಗದಿತ ಇಲಾಖಾ ಪರೀಕ್ಷೆಗಳಲ್ಲಿ ತೇರ್ಗಡೆ ಹೊಂದಬೇಕು.

ಇ. ಕರ್ತವ್ಯಕ್ಕೆ ಹಾಜರಾಗುವ ಮುನ್ನ ಅವರ ವಯಸ್ಸು ಮತ್ತು ವಿದ್ಯಾರ್ಹತೆ ಬಗ್ಗೆ ಮೂಲ ದಾಖಲೆಗಳನ್ನು ವಾಣಿಜ್ಯ ತೆರಿಗೆ ಆಯುಕ್ತರ ಮುಂದೆ ಹಾಜರುಪಡಿಸತಕ್ಕದ್ದು.

ಈ. ಇವರನ್ನು ಕರ್ತವ್ಯಕ್ಕೆ ತೆಗೆದುಕೊಳ್ಳುವ ಮುನ್ನ ಮೂಲ ದಾಖಲೆಗಳನ್ನು ತಾಳೆ ನೋಡುವಂತೆ ವಾಣಿಜ್ಯ ತೆರಿಗೆಗಳ ಆಯುಕ್ತರನ್ನು ಕೋರಲಾಗಿದೆ.

ಉ. ಈ ಅಭ್ಯರ್ಥಿಗೆ ನಿಯಮಾನುಸಾರ ತರಬೇತಿಯನ್ನು ವಾಣಿಜ್ಯ ತೆರಿಗೆ ಆಯುಕ್ತರು ಏರ್ಪಡಿಸುತ್ತಾರೆ.

ಊ. ಅಭ್ಯರ್ಥಿಯು ಈ ಅಧಿಸೂಚನೆಯನ್ನು ರಿಜಿಸ್ಟರ್ಡ್ ಪೋಸ್ಟ್ ಕಳಿಸಿದ ದಿನಾಂಕದಿಂದ 15 ದಿನಗಳೊಳಗೆ ಕೆಲಸಕ್ಕೆ ಹಾಜರಾಗತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ. ಆರ್. 1512 **ಬಿ. ಪುಟ್ಟಣ್ಣ**

ಸರ್ಕಾರದ ಅಧೀನ ಕಾರ್ಯದರ್ಶಿ, ಆರ್ಥಿಕ ಇಲಾಖೆ (ವಾಣಿಜ್ಯ ತೆರಿಗೆ-2).

## ಸಮಾಜ ಕಲ್ಯಾಣ ಸಚಿವಾಲಯ

**ವಿಷಯ:** ದಿವಂಗತ ಡಿ. ದೇವರಾಜ ಅರಸ್ ಅವರ ಪ್ರತಿಮೆಯನ್ನು ಬದಲಾಯಿಸಿ ಪ್ರತಿಷ್ಠಾಪಿಸುವುದು- ಆದೇಶ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ: ಸಕಇ 127 ಕೆಎಂ ಯು 98, ದಿ: 31-3-1999.

2. ಸರ್ಕಾರಿ ಆದೇಶ ಸಂಖ್ಯೆ: ಸಕಇ 236 ಬಿಎಂಎಸ್ 2002, ದಿ: 19-6-2003.

3. ನಿರ್ದೇಶಕರು, ಹಿಂದುಳಿದ ವರ್ಗಗಳ ಇಲಾಖೆ ಇವರ ಏಕ ಕಡತ ಸಂ: ಬಿಸಿಡಿಇ: ಸಿಡಿಎನ್-2: ಸಿಆರ್-22, 2003-04 ರಲ್ಲಿ ಸಲ್ಲಿಸಿರುವ ದಿನಾಂಕ: 30-8-03, 30-9-03 ಹಾಗೂ ದಿ: 29-10-03 ರ ಟಿಪ್ಪಣಿಗಳು.

**ಪ್ರಸ್ತಾವನೆ:**

ವಿಧಾನಸೌಧದ ಪಶ್ಚಿಮ ದಿಕ್ಕಿನ ಆವರಣದಲ್ಲಿ ಪ್ರತಿಷ್ಠಾಪಿಸಲಾಗಿರುವ ದಿವಂಗತ ಡಿ. ದೇವರಾಜ ಅರಸುರವರ ಪ್ರತಿಮೆಯಲ್ಲಿನ, ಹೋಲಿಕೆ, ವ್ಯತ್ಯಾಸವನ್ನು ಪರಿಶೀಲಿಸಿ ಈಗ ಪ್ರತಿಷ್ಠಾಪಿಸಿರುವ ಪ್ರತಿಮೆಯನ್ನು ಬದಲಾಯಿಸುವ ಬಗೆಗೆ ಮೇಲಿನ ಉಲ್ಲೇಖ (1)ರಲ್ಲಿನ ಸರ್ಕಾರದ ಆದೇಶದಲ್ಲಿ ಇದೊಂದು ವಿಶೇಷ ಪ್ರಕರಣವೆಂದು ಪರಿಗಣಿಸಿ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯ ಪಾರದರ್ಶಕತೆ ಅಧಿನಿಯಮ, ಅಧಿನಿಯಮ 1999 ಕಲಂ 34 (ಬಿ, 14 (ಜಿ)ರ ಉಪಲಬ್ದಗಳನ್ವಯ ಪ್ರತಿಮೆಯ ಬದಲಾವಣೆಗೆ ಈ ಕೆಳಗಿನಂತೆ ಅನುಮೋದನೆ ನೀಡಿ ಆದೇಶ ಹೊರಡಿಸಲಾಗಿದೆ.

1. ರೂ. 4.50 ಲಕ್ಷಗಳ ವೆಚ್ಚದಲ್ಲಿ ಮೆ: ವಾಗ್‌ಸ್ಕಲ್ಪ್ಚರ್ಸ್ ಮುಂಬಾಯಿ ಇವರಿಂದ 06 ಅಡಿ ಎತ್ತರದ ಮಾದರಿ ಪ್ರತಿಮೆಯನ್ನು ರೂ. 4.40 ಲಕ್ಷಗಳ ವೆಚ್ಚದಲ್ಲಿ ಮಾಡಿಸುವುದು.
2. ಮಾದರಿ ಪ್ರತಿಮೆಯನ್ನು ಅನುಮೋದಿಸಿದ ನಂತರ ರೂ. 22.00 ಲಕ್ಷಗಳ ವೆಚ್ಚದಲ್ಲಿ 14 ಅಡಿ ಎತ್ತರದ ಪ್ರತಿಮೆಯ ತಯಾರಿಕೆಗೆ ಆದೇಶ ನೀಡುವುದು.
3. ಮಾದರಿ ಪ್ರತಿಮೆಯ ನಿಲುವು ಹಾಗೂ ಹೋಲಿಕೆ ದಿವಂಗತ ದೇವರಾಜ ಅರಸುರವರಿಗೆ ಹೋಲುತ್ತದೆಯೇ ಎಂಬುದನ್ನು ಮಾನ್ಯ ಸಮಾಜ ಕಲ್ಯಾಣ ಸಚಿವರು ಹಾಗೂ ಮಾನ್ಯ ಕನ್ನಡ ಮತ್ತು ಸಂಸ್ಕೃತಿ ರಾಜ್ಯ ಸಚಿವರು ಖಚಿತ ಪಡಿಸಿಕೊಂಡು ಮುಂದಿನ ಕ್ರಮಗಳನ್ನು ಜರುಗಿಸುವುದು.

ಉಲ್ಲೇಖ (2)ರಲ್ಲಿ ಓದಲಾದ ಏಕ ಕಡತದ ಟಿಪ್ಪಣಿಯಲ್ಲಿ ಹಿಂದುಳಿದ ವರ್ಗಗಳ ಇಲಾಖೆಯ ನಿರ್ದೇಶಕರು 06 ಅಡಿ ಎತ್ತರದ ಮಾದರಿ ಪ್ರತಿಮೆಯನ್ನು ಕೈಬಿಟ್ಟು 14 ಅಡಿ ಎತ್ತರದ ಕಂಚಿನ ಪ್ರತಿಮೆಯನ್ನು ತಯಾರಿಸಲು ಮೆ: ವಾಗ್‌ಸ್ಕಲ್ಪ್ಚರ್ಸ್ ಅವರಿಗೆ ಕಾರ್ಯಾದೇಶ ನೀಡುವ ಬಗ್ಗೆ ಉಲ್ಲೇಖ (1)ರ ಆದೇಶವನ್ನು ಮಾರ್ಪಾಡು ಮಾಡುವಂತೆ ಕೋರಿರುತ್ತಾರೆ. ಈ ಕುರಿತಂತೆ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿದ್ದು, ದಿನಾಂಕ: 30-6-2003ರಂದು ಮಾನ್ಯ ಸಮಾಜ ಕಲ್ಯಾಣ ಸಚಿವರು ಹಾಗೂ ನಿರ್ದೇಶಕರು ಹಿಂದುಳಿದ ವರ್ಗಗಳ ಇಲಾಖೆ, ಇವರುಗಳನ್ನೊಳಗೊಂಡ ತಂಡವು ಮುಂಬಯಿನಲ್ಲಿರುವ ಮೆ: ವಾಗ್‌ಸ್ಕಲ್ಪ್ಚರ್ಸ್ ಸ್ಟುಡಿಯೋಗೆ ಭೇಟಿ ನೀಡಿ ಅವರು ತಯಾರಿಸಿದ್ದು ವಿವಿಧ ವ್ಯಕ್ತಿಗಳ ಪ್ರತಿಮೆಗಳನ್ನು ಹಾಗೂ ದಿವಂಗತ ದೇವರಾಜ ಅರಸುರವರ ಕೀ ಮಾಡೆಲ್ ಪ್ರತಿಮೆಯನ್ನು ವೀಕ್ಷಿಸಿ, ಕಲಾ ನೈಪುಣ್ಯತೆ ತೃಪ್ತಿಕರವಾಗಿದೆ ಎಂದು ಮನವರಿಕೆಯಾಗಿದ್ದರಿಂದ ಹಾಗೂ ಕಾಲಾವಕಾಶ ಕಡಿಮೆ ಇರುವುದರಿಂದ ಮತ್ತು ಎರಡು ಪ್ರತಿಮೆಗಳಿಗೆ ಅಗತ್ಯವಿರುವ ಅನುದಾನದ ಕೊರತೆ ಇರುವುದರಿಂದ, 14 ಅಡಿಗಳ ಎತ್ತರದ ಪ್ರತಿಮೆಯನ್ನು ತಯಾರಿಸಲು ಮೆ: ವಾಗ್‌ಸ್ಕಲ್ಪ್ಚರ್ಸ್ ಬಾಂಬೆ ಇವರಿಗೆ ಕಾರ್ಯಾದೇಶ ನೀಡಲು ಸರ್ಕಾರದ ಪೂರ್ವಾನುಮತಿಯನ್ನು ಕೋರಿದ್ದಾರೆ. ಆದರಂತೆ ಈ ಆದೇಶ.

**ಸರ್ಕಾರಿ ಸಂಖ್ಯೆ: ಸ ಕ ಇ 383 ಬಿಎಂಎಸ್ 2003, ಬೆಂಗಳೂರು, ದಿನಾಂಕ: 24ನೇ ನವೆಂಬರ್ 2003**

ನಿರ್ದೇಶಕರು ಹಿಂದುಳಿದ ವರ್ಗಗಳ ಇಲಾಖೆ ಇವರ ಏಕ ಕಡತದಲ್ಲಿನ ದಿ: 29-10-2003ರ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದೆ.

ಸರ್ಕಾರದ ಆದೇಶ ಸಂಖ್ಯೆ: ಸಕಇ 236 ಬಿಎಂಎಸ್ 2002, ದಿನಾಂಕ: 19-6-2003ರನ್ನು ಭಾಗಶಃ ಮಾರ್ಪಡಿಸಿ ಈ ಕೆಳಗಿನಂತೆ ಆದೇಶಿಸಿದೆ.

1. ತತ್‌ಕಾಲಕ್ಕೆ ದಿವಂಗತ ದೇವರಾಜ ಅರಸು ರವರ 14 ಅಡಿ ಎತ್ತರದ ಕಂಚಿನ ಪ್ರತಿಮೆಯನ್ನು ರೂ. 22.00 ಲಕ್ಷಗಳ (ರೂಪಾಯಿ ಇಪ್ಪತ್ತೆರಡು ಲಕ್ಷಗಳು) ವೆಚ್ಚದಲ್ಲಿ ಮೆ: ವಾಗ್‌ಸ್ಕಲ್ಪ್ಚರ್ಸ್ ಬಾಂಬೆ, ಇವರಿಂದ ತಯಾರಿಸಲು ಆದೇಶಿಸಲಾಗಿದೆ.
2. ನಿರ್ದೇಶಕರು ಹಿಂದುಳಿದ ವರ್ಗಗಳ ಇಲಾಖೆ ಇವರಿಗೆ 14 ಅಡಿ ಎತ್ತರದ ಕಂಚಿನ ಪ್ರತಿಮೆಯ ತಯಾರಿಕೆಯ ಬಗ್ಗೆ ಮೆ: ವಾಗ್‌ಸ್ಕಲ್ಪ್ಚರ್ಸ್ ಮುಂಬಯಿ ಇವರಿಗೆ ಕಾರ್ಯಾದೇಶ ನೀಡಲು ಹಾಗೂ ಮೆ: ವಾಗ್‌ಸ್ಕಲ್ಪ್ಚರ್ಸ್ ಮುಂಬಯಿ ಅವರೊಂದಿಗೆ ಸೂಕ್ತವಾದ ಕರಾರು ಪತ್ರವನ್ನು ಮಾಡಿಕೊಳ್ಳಲು ಅನುಮತಿ ನೀಡಿದೆ. 14 ಅಡಿ ಕಂಚಿನ ಪ್ರತಿಮೆಯ ಮೇಲ್ವಿಚಾರಣೆಯನ್ನು ನಿರ್ದೇಶಕರು ಹಿಂದುಳಿದ ವರ್ಗಗಳ ಇಲಾಖೆ ಇವರು ಮಾಡತಕ್ಕದ್ದು.

ಮೆ: ವಾಗ್‌ಸ್ಕಲ್ಪ್ಚರ್ಸ್ ಮುಂಬಯಿ ಇವರಿಗೆ ರೂ. 16.50 ಲಕ್ಷಗಳನ್ನು (ಹದಿನಾರು ಲಕ್ಷ ಐವತ್ತು ಸಾವಿರ ರೂ.ಗಳು) ನಿಯಮಾನುಸಾರ ಪಾವತಿ ಮಾಡಲು ಅನುಮತಿ ನೀಡಲಾಗಿದೆ. ಈ ವೆಚ್ಚವನ್ನು ಸರ್ಕಾರದ ಆದೇಶ ಸಂ: ಸಕಇ 127 ಕೆ ಎಂ ಯು 98, ದಿನಾಂಕ: 10-3-2003ರ ಪ್ರಕಾರ ಜಿಲ್ಲಾಧಿಕಾರಿಗಳ ಪಿ. ಡಿ. ಖಾತೆಯಲ್ಲಿ ರೂ. 15.00 ಲಕ್ಷಗಳಲ್ಲಿ ಮತ್ತು ಕೊರತೆ ಬೀಳುವ ರೂ. 1.50 ಲಕ್ಷ ಹಣವನ್ನು ಹಿಂದುಳಿದ ವರ್ಗಗಳ ಇಲಾಖೆಯ ವಶದಲ್ಲಿರುವ ಹಣದಲ್ಲಿ ಭರಿಸುವಂತೆ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ. ಆರ್. 1513

**ಎಂ. ಪ್ರಾಣದೇವ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಮಾಜ ಕಲ್ಯಾಣ ಇಲಾಖೆ.

**ಅಧಿಸೂಚನೆ ಸಂಖ್ಯೆ: ಸಕಇ 306 ಬಿಇಟಿ 2003, ಬೆಂಗಳೂರು, ದಿನಾಂಕ: 28ನೇ ನವೆಂಬರ್, 2003**

ಶ್ರೀ ಅಖಿಲ್ ಮಿರ್ಜಾ, ಉಪನ್ಯಾಸಕರು ಪದವಿ ಪೂರ್ವ ಶಿಕ್ಷಣ ಇಲಾಖೆ ಇವರು ಹಿಂದುಳಿದ ವರ್ಗಗಳ ಇಲಾಖೆಯಲ್ಲಿ ಸಹಾಯಕ ನಿರ್ದೇಶಕ (ಆಡಳಿತ) ಈ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದು, ಸದರಿಯವರನ್ನು ದಿನಾಂಕ: 18-6-2002ರಂದು ಶ್ರೀ ದೇವರಾಜ ಅರಸು ಸಂಶೋಧನಾ ಸಂಸ್ಥೆಯಲ್ಲಿ ಖಾಲಿಯಿದ್ದ ಸಹಾಯಕ ನಿರ್ದೇಶಕರ ಹುದ್ದೆಗೆ ವರ್ಗಾಯಿಸಲಾಗಿದೆ.

ಶ್ರೀ ದೇವರಾಜ ಅರಸು ಸಂಶೋಧನಾ ಸಂಸ್ಥೆಯ ಕಾರ್ಯಚಟುವಟಿಕೆಗಳನ್ನು ಬಲಪಡಿಸಲು ಮತ್ತು ಪುನಶ್ಚೇತನಗೊಳಿಸಲು ರಚಿಸಲಾದ ಮಾರ್ಗದರ್ಶಿ / ಸೂಚಿಗಳನ್ವಯ ಸಹಾಯಕ ನಿರ್ದೇಶಕರು, ಉಪ ನಿರ್ದೇಶಕರ ಬದಲಾಗಿ ಸಂಶೋಧನಾಧಿಕಾರಿಗಳನ್ನು ನೇಮಿಸಲು ಕ್ರಮ ಕೈಗೊಳ್ಳುತ್ತಿರುವುದರಿಂದ ಶ್ರೀ ಅಖಿಲ್ ಮಿರ್ಜಾ, ಸಹಾಯಕ ನಿರ್ದೇಶಕರು, ಇವರ ಸೇವೆಯನ್ನು ಸಾರ್ವಜನಿಕ ಹಿತದೃಷ್ಟಿಯಿಂದ ಮತ್ತು ತಕ್ಷಣದಿಂದ ಜಾರಿಗೆ ಬರುವಂತೆ ಅವರ ಮಾತೃ ಇಲಾಖೆಯಾದ ಶಿಕ್ಷಣ ಇಲಾಖೆ (ಪದವಿ ಪೂರ್ವ)ಗೆ ಹಿಂತಿರುಗಿಸಲಾಗಿದೆ. ಸದರಿಯವರು ಮಾತೃ ಇಲಾಖೆಯಲ್ಲಿ ತಕ್ಷಣವೇ ಮುಂದಿನ ಸ್ಥಳ ನಿಯುಕ್ತಿಗಾಗಿ ಹಾಜರಾಗತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ. ಆರ್. 1514 **ಎಂ. ಎಸ್. ಮರುಳಸಿದ್ದಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ, ಸಮಾಜ ಕಲ್ಯಾಣ ಇಲಾಖೆ.

## ಕಂದಾಯ ಸಚಿವಾಲಯ

**ವಿಷಯ:** ಮೈಸೂರು (ಉತ್ತರ) ಉಪ ನೋಂದಣಿ ಕಚೇರಿಯನ್ನು ಪ್ರಭುದೇವ ಟಾಕೀಸ್ ರಸ್ತೆ, ಖಿಲ್ಲಾ ಮೊಹಲ್ಲಾ, ಮೈಸೂರು ಇಲ್ಲಿಗೆ ಸ್ಥಳಾಂತರ ಕುರಿತು.

**ಓದಲಾಗಿದೆ:** ನೋಂದಣಿ ಮಹಾಪರಿವೀಕ್ಷಕರ ಹಾಗೂ ಮುದ್ರಾಂಕಗಳ ಆಯುಕ್ತರವರ ವರದಿ ಸಂಖ್ಯೆ: ಬಿಎಲ್‌ಡಿ / 19/ 01-02, ದಿನಾಂಕ: 14-10-2003.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ: 14-10-2003ರ ಪತ್ರದಲ್ಲಿ ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರವರು ಪ್ರಸ್ತಾವನೆ ಸಲ್ಲಿಸಿ ಮೈಸೂರು ಉತ್ತರ ಉಪ ನೋಂದಣಿ ಕಚೇರಿ ಹಾಲಿ ಕಾರ್ಯನಿರ್ವಹಿಸುತ್ತಿರುವ ಕಟ್ಟಡವು ಶಿಥಿಲಾವಸ್ಥೆಯಲ್ಲಿದ್ದು, ಆ ಸ್ಥಳದಲ್ಲಿ ಮಿನಿ ವಿಧಾನಸೌಧ ಕಟ್ಟಡ ನಿರ್ಮಾಣದ ಸಲುವಾಗಿ ಉಪ ನೋಂದಣಿ ಕಛೇರಿಯನ್ನು ಸಾರ್ವಜನಿಕರ ಹಿತದೃಷ್ಟಿಯಿಂದ 2/4, ಪ್ರಭುದೇವ ಟಾಕೀಸ್ ರಸ್ತೆ, ಖಿಲ್ಲಾ ಮೊಹಲ್ಲಾ, ಮೈಸೂರು ಇಲ್ಲಿಗೆ ಸ್ಥಳಾಂತರಿಸಲು, ಲೋಕೋಪಯೋಗಿ ಇಲಾಖೆಯು ಸದರಿ ಕಟ್ಟಡಕ್ಕೆ (30X 90 ಅಡಿ ನಿವೇಶನ) ನೆಲ ಅಂತಸ್ತು ಮತ್ತು ಒಂದನೇ ಅಂತಸ್ತು ಆರ್.ಸಿ.ಸಿ. ಕಟ್ಟಡಕ್ಕೆ (23.27 ಚದರ) 2003-04ನೇ ಸಾಲಿಗೆ ನ್ಯಾಯಸಮ್ಮತ ಮಾಸಿಕ ಬಾಡಿಗೆ ರೂ. 15,100-00- ಎಂದು (ಹದಿನೈದು ಸಾವಿರದ ಒಂದು ನೂರು ರೂಪಾಯಿ) ನಿಗದಿಪಡಿಸಿದ್ದಾರೆ. ಕಟ್ಟಡದ ಮಾಲೀಕರು ಕಟ್ಟಡದ ಬಾಡಿಗೆಯನ್ನು ಲೋಕೋಪಯೋಗಿ ಇಲಾಖೆ ನಿಗದಿಪಡಿಸಿದ ಬಾಡಿಗೆ ದರಕ್ಕೆ ನೀಡಲು ಅನುಮತಿ ಪತ್ರ ನೀಡಿದ್ದಾರೆ. ಆದ್ದರಿಂದ ಶ್ರೀ ಎ. ಎಸ್. ಗುರುಸ್ವಾಮಿ, ಶಾಸಕರು ರವರ ಮಾಲೀಕತ್ವದ ನಂ. 2/4. ಪ್ರಭುದೇವ ಟಾಕೀಸ್ ರಸ್ತೆ, ಖಿಲ್ಲಾಮೊಹಲ್ಲಾ, ಮೈಸೂರು ಈ ಕಟ್ಟಡವನ್ನು ಬಾಡಿಗೆಯ ಮೇಲೆ ಪಡೆಯಲು ಆದೇಶ ಕೋರಿ ಸಲ್ಲಿಸಿರುವ ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರವರ ಪ್ರಸ್ತಾವನೆ ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 21 ಮುನೋಸ 2003, ಬೆಂಗಳೂರು, ದಿನಾಂಕ: 25ನೇ ನವೆಂಬರ್, 2003**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಮೈಸೂರು (ಉತ್ತರ) ಉಪ ನೋಂದಣಿ ಕಛೇರಿಯನ್ನು ಸದ್ಯ ಕಾರ್ಯನಿರ್ವಹಿಸುತ್ತಿರುವ ಕಟ್ಟಡದಿಂದ ಶ್ರೀ ಎ.ಎಸ್. ಗುರುಸ್ವಾಮಿ, ಶಾಸಕರು ಅವರ ಮಾಲೀಕತ್ವದ ನಂ. 2/ 4 ಕಟ್ಟಡದ (30X90 ಅಡಿ ನಿವೇಶನ) ನೆಲ ಅಂತಸ್ತು ಮತ್ತು ಒಂದನೇ ಅಂತಸ್ತು ಆರ್.ಸಿ.ಸಿ. ಕಟ್ಟಡಕ್ಕೆ (23.27 ಚದರ) 2003-2004ನೇ ಸಾಲಿಗೆ ಮಾಹೆಯಾನ 15,100-00 ರೂ.ಗಳಂತೆ ಬಾಡಿಗೆ ಆಧಾರದ ಮೇಲೆ ಪಡೆದು ಕಛೇರಿಯನ್ನು ಸ್ಥಳಾಂತರಿಸಲು ಸರ್ಕಾರವು ಮಂಜೂರಾತಿ ನೀಡಿದೆ.

ಇದರಿಂದುಂಟಾಗುವ ವೆಚ್ಚವನ್ನು ಲೆಕ್ಕ ಶೀರ್ಷಿಕೆ 2030-03-001-072 ರಲ್ಲಿ ಪ್ರಸಕ್ತ ಸಾಲಿನಲ್ಲಿ ಒದಗಿಸಿರುವ ಆಯವ್ಯಯದ ಮಿತಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಬಿ 96, ದಿನಾಂಕ: 10-7-96ರಲ್ಲಿ ಸರ್ಕಾರದ ಕಾರ್ಯದರ್ಶಿಗಳಿಗೆ ನಿಯೋಜಿಸಿರುವ ಆರ್ಥಿಕ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ. ಆರ್. 1515 **ಎಸ್. ಜೆ. ನಾರಾಯಣ**

ಪೀಠಾಧಿಕಾರಿ, ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ).

**ವಿಷಯ:** ಡಾ: ಅಂಬೇಡ್ಕರ್ ವಿದ್ಯಾನಿಕೇತನ ಹೊಸ ಕಾಲೋನಿ ಹುಲ್ಲೆಕೇರಿಗ್ರಾಮ, ತುರುವೇಕೇರಿ ತಾ: ಹಾಲಿ ನಂ. 949, ಎಂ.ಸಿ. ಲೇಔಟ್, 2ನೇ ಮುಖ್ಯರಸ್ತೆ, ವಿಜಯನಗರ, ಬೆಂಗಳೂರು ಈ ಸಂಸ್ಥೆಗೆ ನೇಮಕ ಮಾಡಿದ ಆಡಳಿತಾಧಿಕಾರಿ ಅವಧಿ ವಿಸ್ತರಣೆ ಕುರಿತು.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ: ಕಂಇ 3 ಮುನೋಸೋ 2003, ದಿನಾಂಕ: 23-5-2003.

2. ಆಡಳಿತಾಧಿಕಾರಿಗಳ ಪತ್ರ ಸಂಖ್ಯೆ ದಿನಾಂಕ: 23-10-2003.

**ಪ್ರಸ್ತಾವನೆ:**

ಮೇಲೆ ಓದಲಾದ (1) ರ ಸರ್ಕಾರಿ ಆದೇಶದಲ್ಲಿ ಡಾ: ಅಂಬೇಡ್ಕರ್ ವಿದ್ಯಾನಿಕೇತನ ಸಂಸ್ಥೆ, ಹೊಸಕಾಲೋನಿ, ಹುಲ್ಲೆಕೇರಿ ಗ್ರಾಮ, ತುರುವೇಕೆರೆ ತಾಲ್ಲೂಕು ಈ ಸಂಸ್ಥೆಗೆ ಆಡಳಿತಾಧಿಕಾರಿ ನೇಮಕ ಮಾಡಲಾಗಿತ್ತು. ಓದಲಾದ (2)ರ ಪ್ರಕಾರ ಸಂಸ್ಥೆಗೆ

ನೇಮಕವಾಗಿರುವ ಆಡಳಿತಾಧಿಕಾರಿಗಳು ವರದಿ ಸಲ್ಲಿಸಿ ಸಂಘವನ್ನು ರದ್ದುಪಡಿಸುವ ಕುರಿತು ಸ್ವೀಕೃತ ಮನವಿಗಳನ್ನು ನೀಡಿ ಆಡಳಿತಾಧಿಕಾರಿ ಅವಧಿ ವಿಸ್ತರಣೆ ಕೋರಿದ್ದನ್ನು ಪರಿಶೀಲಿಸಿ ಆಡಳಿತಾಧಿಕಾರಿ ಅವಧಿಯನ್ನು ವಿಸ್ತರಿಸಲು ಸರ್ಕಾರವು ತೀರ್ಮಾನಿಸಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 3 ಮುನೋಸೊ 2003, ಬೆಂಗಳೂರು, ದಿನಾಂಕ: 22ನೇ ನವೆಂಬರ್ 2003**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 27-ಎ ಪ್ರಕಾರ ಡಾ: ಅಂಬೇಡ್ಕರ್ ವಿದ್ಯಾನಿಕೇತನ, ಹೊಸಕಾಲೋನಿ, ಹುಲ್ಲಿಕೇರಿ ಗ್ರಾಮ ಈ ಸಂಸ್ಥೆಯು ನಡೆಸುತ್ತಿರುವ ಮಹಾತ್ಮಾ ಗಾಂಧಿ ಪ್ರೌಢಶಾಲೆ, ಚನ್ನರಾಯಪಟ್ಟಣ ಇಲ್ಲಿಗೆ ನೇಮಕವಾಗಿರುವ ಆಡಳಿತಾಧಿಕಾರಿ ಅವಧಿಯನ್ನು ದಿನಾಂಕ: 23-11-2003 ರಿಂದ 6 ತಿಂಗಳ ಅವಧಿಗೆ ವಿಸ್ತರಿಸಲಾಗಿದೆ.

ಆಡಳಿತಾಧಿಕಾರಿಗಳು ಈ ಅವಧಿಯಲ್ಲಿ ಸಂಸ್ಥೆಯ ಅವ್ಯವಹಾರಗಳನ್ನು ಸರಿಪಡಿಸಿ ಚುನಾವಣೆ ನಡೆಸಿ ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರ ಹಸ್ತಾಂತರಿಸಲು ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ. ಆರ್. 1516

ಎಸ್. ಶಂಕರನಾರಾಯಣ

ಸರ್ಕಾರದ ಉಪಕಾರ್ಯದರ್ಶಿ, ಕಂದಾಯ ಇಲಾಖೆ.

## ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ

**ವಿಷಯ:** ಹಾವೇರಿ ಜಿಲ್ಲೆಯಲ್ಲಿ ದೊಡ್ಡ ಪ್ರಮಾಣದ ಗ್ರಾಮೀಣ ವಿಜ್ಞಾನ ಕೇಂದ್ರ ಸ್ಥಾಪಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ವಿಯಇ 6 ಟಿಸಿಹೆಚ್ 94, ದಿನಾಂಕ: 20-9-94.
2. ಕಾರ್ಯದರ್ಶಿ, ಹಾವೇರಿ ವಿಜ್ಞಾನ ಶಿಕ್ಷಣ ಸಮಿತಿ, ಹಾವೇರಿ ಇವರ ಪತ್ರ ಸಂಖ್ಯೆ: 0.7 ಧನ ಸಹಾಯ 2003-04, ದಿನಾಂಕ: 13-6-2003.
3. ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತು, ಬೆಂಗಳೂರು ಇವರ ಪತ್ರ ಸಂಖ್ಯೆ: 6.6. /ಎಸ್‌ಎಸ್‌ಸಿ/ ಜಿಸಿ/ 685 ದಿನಾಂಕ: 23-8-2003.

**ಪ್ರಸ್ತಾವನೆ:**

ಓದಲಾದ (1)ರ ಆದೇಶದನ್ವಯ ಹಾವೇರಿ ವಿಜ್ಞಾನ ಶಿಕ್ಷಣ ಸಮಿತಿ ಕಾರ್ಯದರ್ಶಿಗಳು ಗ್ರಾಮೀಣ ಜನತೆಯಲ್ಲಿ ವೈಜ್ಞಾನಿಕ ಮನೋಭಾವನೆಯ ಅಭಿರುಚಿಯನ್ನು ಬೆಳೆಸಲು ಹಾಗೂ ಶಾಲಾ ವಿದ್ಯಾರ್ಥಿಗಳಲ್ಲಿ ವಿಜ್ಞಾನ ಜನಪ್ರಿಯಗೊಳಿಸುವಲ್ಲಿ ಕಾರ್ಯ ನಿರ್ವಹಿಸುತ್ತಿದ್ದು, ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತು ಕೇಂದ್ರ ಸರ್ಕಾರದ ಎನ್.ಸಿ. ಎಸ್. ಟಿ. ಸಹಯೋಗದೊಂದಿಗೆ ನಡೆಸುವ 11ನೇ ಅಖಿಲ ಕರ್ನಾಟಕ ರಾಷ್ಟ್ರೀಯ ವಿಜ್ಞಾನ ಸಮಾವೇಶವನ್ನು ಹಾವೇರಿಯಲ್ಲಿಯ ಈ ಕೇಂದ್ರವು ಆಯೋಜಿಸಲು ನಿರ್ಧರಿಸಿರುವುದರಿಂದ ಈ ಸಂಸ್ಥೆಯ ಕೇಂದ್ರವನ್ನು ಇತರೆ 15 ದೊಡ್ಡ ಪ್ರಮಾಣದ ವಿಜ್ಞಾನ ಕೇಂದ್ರಗಳಂತೆ ಪರಿಗಣಿಸಿ ದೊಡ್ಡ ಪ್ರಮಾಣದ ವಿಜ್ಞಾನ ಕೇಂದ್ರ ಮಂಜೂರು ಮಾಡುವಂತೆ ಓದಲಾದ 3ರ ಪತ್ರದಲ್ಲಿ ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತು ಶಿಫಾರಸ್ಸು ಮಾಡಿರುತ್ತದೆ.

ಸದರಿ ಪ್ರಸ್ತಾವನೆಯನ್ನು ಸರ್ಕಾರ ಮಟ್ಟದಲ್ಲಿ ಪರಿಶೀಲಿಸಿ, ಈ ಕೆಳಗಿನಂತೆ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ವಿಯಇ 83 ರಾವಿಪ 2003, ಬೆಂಗಳೂರು, ದಿನಾಂಕ: 30ನೇ ಅಕ್ಟೋಬರ್ 2003**

ಪ್ರಸ್ತಾವನೆಯಲ್ಲಿ ವಿವರಿಸಿದಂತೆ ಜನ ಸಾಮಾನ್ಯರಲ್ಲಿ ವೈಜ್ಞಾನಿಕ ಮನೋಭಾವನೆಯನ್ನು ಮೂಡಿಸಲು ಹಾಗೂ ಅಭಿವೃದ್ಧಿ ಕಾರ್ಯಗಳಲ್ಲಿ ವಿಜ್ಞಾನ ಮತ್ತು ತಂತ್ರಜ್ಞಾನ ಬಳಕೆ ಮಾಡಿ ರಾಜ್ಯದ ಪ್ರಗತಿಯನ್ನು ಮುನ್ನಡೆಸುವ ಬಗ್ಗೆ ಮುಖ್ಯವಾಗಿ ಗ್ರಾಮೀಣ ಜನರಲ್ಲಿ ಅರಿವುಂಟು ಮಾಡಲು ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯ ಉದ್ದೇಶಿತ ಕಾರ್ಯಕ್ರಮವನ್ನು ಅನುಷ್ಠಾನಗೊಳಿಸುತ್ತಿರುವ ಹಾವೇರಿ ವಿಜ್ಞಾನ ಶಿಕ್ಷಣ ಸಮಿತಿ ಹಾವೇರಿ ಜಿಲ್ಲೆ ಸಂಸ್ಥೆಯನ್ನು ಈ ಕೆಳಕಂಡ ಷರತ್ತುಗಳನುಸಾರ ದೊಡ್ಡ ಪ್ರಮಾಣದ ಗ್ರಾಮೀಣ ವಿಜ್ಞಾನ ಕೇಂದ್ರವನ್ನಾಗಿ ಪರಿಗಣಿಸಿದೆ.

1. ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತಿನವರ ಸಂಯೋಗದೊಂದಿಗೆ ಕಾರ್ಯಕ್ರಮಗಳನ್ನು ಕೈಗೊಳ್ಳುತ್ತಿರಬೇಕು ಮತ್ತು ಕೇಂದ್ರದ ನಿರ್ವಹಣೆಗಾಗಿ ಸಂಬಂಧಪಟ್ಟ ಜಿಲ್ಲಾಧಿಕಾರಿ/ ಜಿಲ್ಲಾ ಪಂಚಾಯತ್ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ಹಾಗೂ ಜಿಲ್ಲಾ ಮಟ್ಟದ ಶಿಕ್ಷಣ ಇಲಾಖೆಯ ಅಧಿಕಾರಿಗಳಾದ ಜಿಲ್ಲಾ ಉಪನಿರ್ದೇಶಕರು ಸಾರ್ವಜನಿಕ ಶಿಕ್ಷಣ ಇಲಾಖೆ ಮತ್ತು ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತಿನ ಕಾರ್ಯಕಾರಿ ಸಮಿತಿಯ ಸ್ಥಳೀಯ ಸದಸ್ಯರನ್ನು ಒಳಗೊಂಡು ಕಾರ್ಯಕಾರಿ ಸಮಿತಿಯನ್ನು ರಚಿಸಬೇಕು.
2. ಸಂಸ್ಥೆಗಳು ನಡೆಸುವ ಕಾರ್ಯಚಟುವಟಿಕೆಗಳ ಬಗ್ಗೆ ಪ್ರತಿ ಮೂರು ತಿಂಗಳಿಗೊಮ್ಮೆ ವರದಿಯನ್ನು ಸರ್ಕಾರಕ್ಕೆ ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತಿನ ಮೂಲಕ ಸಲ್ಲಿಸುವುದು.
3. ಪ್ರತಿ ವರ್ಷ ಚಟುವಟಿಕೆಗಳ ಖರ್ಚು ವೆಚ್ಚಗಳ ಬಗ್ಗೆ ಅಂದಾಜು ಪಟ್ಟಿಯನ್ನು ಮತ್ತು ಖರ್ಚು ಮಾಡಲಾದ ಬಗ್ಗೆ ಸಂಸ್ಥೆಯವರಿಂದ ಆಡಿಟ್ ಮಾಡಿಸಿ ಉಪಯೋಗತಾ ಪ್ರಮಾಣ ಪತ್ರವನ್ನು ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತಿನ ಮೂಲಕ ಸರ್ಕಾರಕ್ಕೆ ಸಲ್ಲಿಸುವುದು.
4. ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತು ಇತರೆ ದೊಡ್ಡ ಪ್ರಮಾಣದ ವಿಜ್ಞಾನ ಕೇಂದ್ರಗಳ ಮಾದರಿಯಲ್ಲಿ ಸ್ಥಳೀಯ ಜಿಲ್ಲಾಡಳಿತ ವತಿಯಿಂದ ಸೂಕ್ತ ಕಟ್ಟಡವನ್ನು ಕೇಂದ್ರಕ್ಕೆ ವಿಜ್ಞಾನ ಚಟುವಟಿಕೆಗಳಿಗಾಗಿ ಪಡೆಯುವಲ್ಲಿ ಸಂಸ್ಥೆಯು ಪ್ರಯತ್ನಿಸಬೇಕು ಹಾಗೂ

5. ವಿಜ್ಞಾನ ಮತ್ತು ತಂತ್ರಜ್ಞಾನವನ್ನು ಜನಪ್ರಿಯಗೊಳಿಸುವ ನಿಟ್ಟಿನಲ್ಲಿ, ಕ್ಷೇತ್ರದಲ್ಲಿನ ಸ್ಥಳೀಯ ಪರಿಣಿತರ ಉಪಯೋಗವನ್ನು ಪಡೆದುಕೊಳ್ಳಬೇಕು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ. ಆರ್. 1517

**ಸುರೇಶ್ ಬಿ. ಕೃಷ್ಣಪ್ಪನವರ್**

ಪೀಠಾಧಿಕಾರಿ, ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ,
ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ.

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ:** ಅರಣ್ಯ ಇಲಾಖೆ ದಿನಾಂಕ 24-10-1980ಕ್ಕಿಂತ ಪೂರ್ವದ ಅರಣ್ಯ ಭೂಮಿಯಲ್ಲಿನ ಅತಿಕ್ರಮಣಗಳನ್ನು ಸಕ್ರಮಗೊಳಿಸುವ ಬಗ್ಗೆ ಮಾರ್ಗ ಸೂಚಿ ಕುರಿತು- ಆದೇಶ.

**ಓದಲಾಗಿದೆ:** ಸರ್ಕಾರಿ ಆದೇಶ ಸಂಖ್ಯೆ: ಎಫ್‌ಇ 5 ಎಫ್‌ಜಿಎಲ್ 90, ದಿನಾಂಕ: 5-5-1997.

**ಪ್ರಸ್ತಾವನೆ:**

ಮೇಲೆ ಓದಲಾದ ಸರ್ಕಾರಿ ಆದೇಶದಲ್ಲಿ ಸರ್ಕಾರವು ದಿನಾಂಕ: 27-4-1978ಕ್ಕಿಂತ ಹಿಂದಿನ ಅರಣ್ಯ ಜಮೀನಿನ ಅತಿಕ್ರಮಣದ ಪ್ರಕರಣಗಳ ಬಗ್ಗೆ ಪರಿಶೀಲಿಸಿ ಅರಣ್ಯ ಜಮೀನನ್ನು ಅರಣ್ಯ (ಸಂರಕ್ಷಣಾ) ಕಾಯ್ದೆ 1980 ರಡಿಯಲ್ಲಿ ಸೂಚಿಸಿರುವಂತೆ ಭಾರತ ಸರ್ಕಾರದ ಅನುಮತಿಯನ್ನು ಪಡೆದು ಸಕ್ರಮಗೊಳಿಸಲು ಆದೇಶಿಸಲಾಗಿತ್ತು. ಭಾರತ ಸರ್ಕಾರದ ಅನುಮೋದನೆಯನ್ನು ಪಡೆದು 1978ಕ್ಕಿಂತ ಪೂರ್ವದಲ್ಲಿ ಆದ 14,848.83 ಹೆ. ಅರಣ್ಯ ಒತ್ತುವರಿಗಳನ್ನು ಸಕ್ರಮಗೊಳಿಸಲಾಗುತ್ತಿದೆ. 1978ಕ್ಕಿಂತ ಪೂರ್ವದಲ್ಲಿ ಆಗಿರುವ ಕೆಲವು ಬಿಟ್ಟುಹೋದ ಅರ್ಹ ಅರಣ್ಯ ಒತ್ತುವರಿಗಳಿಗೆ ಸಂಬಂಧಪಟ್ಟಂತೆ ಹಾಗೂ ದಿನಾಂಕ: 27-4-1978 ರಿಂದ ದಿನಾಂಕ: 24-10-1980 ರವರೆಗೆ ಆಗಿರುವ ಅರಣ್ಯ ಒತ್ತುವರಿಗಳಿಗೆ ಸಂಬಂಧಪಟ್ಟಂತೆ ಕೇಂದ್ರ ಸರ್ಕಾರದ ಅನುಮೋದನೆಯನ್ನು ಪಡೆದು ಸಕ್ರಮಗೊಳಿಸುವ ಬಗ್ಗೆ ಪರಿಶೀಲಿಸಲಾಗುವುದು. ಇದರಲ್ಲಿ ಅರಣ್ಯ ಒತ್ತುವರಿಗಳನ್ನು ಸಕ್ರಮಗೊಳಿಸಲು ಸರ್ಕಾರದಲ್ಲಿ ದಾಖಲಾತಿಗಳಿರುವ ಪ್ರಕರಣಗಳನ್ನು ಅರಣ್ಯ (ಸಂರಕ್ಷಣಾ) ಕಾಯ್ದೆಯನ್ವಯ ಪರಿಶೀಲಿಸಿ ಸೂಕ್ತ ಕ್ರಮವನ್ನು ಕೈಗೊಳ್ಳಲಾಗುವುದು. ಆದರೆ 24-10-1980ರ ಮೊದಲು ಅರಣ್ಯ ಒತ್ತುವರಿಯಾಗಿರುವ ಕೆಲವು ಒತ್ತುವರಿದಾರರ ಪ್ರಕರಣಗಳಲ್ಲಿ ಅರಣ್ಯ ಒತ್ತುವರಿಗಳನ್ನು ಸಕ್ರಮಗೊಳಿಸಲು ಅವರ ಬಳಿಯಲ್ಲಿ ಯಾವುದೇ ದಾಖಲಾತಿಗಳು ಇಲ್ಲದಿರುವುದರಿಂದ ಅವರ ಕೋರಿಕೆಯನ್ನು ಪರಿಗಣಿಸಲು ಸಾಧ್ಯವಾಗಿರುವುದಿಲ್ಲ. ದಿನಾಂಕ: 24-10-1980ರ ಪೂರ್ವದಲ್ಲಿ ಅರಣ್ಯ ಭೂಮಿಯ ಅತಿಕ್ರಮಣ ಮಾಡಿದ್ದು ಅವರ ಕೋರಿಕೆಯನ್ನು ಸಾಬೀತುಪಡಿಸಲು ಯಾವುದೇ ದಾಖಲಾತಿಗಳನ್ನು ಒದಗಿಸಲು ಸಾಧ್ಯವಾಗದೇ ಹೋದಂತಹ ಪ್ರಕರಣಗಳನ್ನು ಪರಿಶೀಲಿಸಿ ಸಕ್ರಮಗೊಳಿಸಲು ಸರ್ಕಾರಕ್ಕೆ ಶಿಫಾರಸ್ಸು ಮಾಡುವ ಉದ್ದೇಶಕ್ಕಾಗಿ ಒಂದು ತಾಲ್ಲೂಕು ಮಟ್ಟದ ಸಮಿತಿಯನ್ನು ರಚಿಸಲು ಸರ್ಕಾರವು ಉದ್ದೇಶಿಸಿದೆ. ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಯವರು ಕೆಲವು ತಾಲ್ಲೂಕುಗಳಲ್ಲಿ ಅರಣ್ಯ ಭೂಮಿಯ ಅತಿಕ್ರಮಣವಾಗಿರುವುದಿಲ್ಲವೆಂದು ತಿಳಿಸಿರುವುದರ ಮೇರೆಗೆ ಆ ತಾಲ್ಲೂಕುಗಳನ್ನು ಹೊರತುಪಡಿಸಿ ಉಳಿದ ತಾಲ್ಲೂಕುಗಳಿಗೆ ಪ್ರತಿ ತಾಲ್ಲೂಕಿಗೆ ಒಂದರಂತೆ ತಾಲ್ಲೂಕು ಮಟ್ಟದ ಸಮಿತಿಯನ್ನು ರಚಿಸಲು ಉದ್ದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಅಪಜೀ 361 ಎಫ್‌ಜಿಎಲ್ 2002 (ಭಾಗ), ಬೆಂಗಳೂರು, ದಿನಾಂಕ: 1ನೇ ಡಿಸೆಂಬರ್ 2003**

ದಿನಾಂಕ: 24-10-1980ರ ಪೂರ್ವದ ಅರಣ್ಯ ಭೂಮಿಯಲ್ಲಿನ ಅತಿಕ್ರಮಣಗಳನ್ನು ಸಕ್ರಮಗೊಳಿಸಲು ಅತಿಕ್ರಮಣದಾರರ ಬಳಿ ಅವರ ಕೋರಿಕೆಯನ್ನು ಸಾಬೀತುಪಡಿಸಲು ಯಾವುದೇ ದಾಖಲಾತಿಗಳನ್ನು ಒದಗಿಸಲು ಸಾಧ್ಯವಾಗದೆ ಹೋದಂತಹ ಪ್ರಕರಣಗಳನ್ನು ಪರಿಶೀಲಿಸಿ ಸರ್ಕಾರಕ್ಕೆ ಶಿಫಾರಸ್ಸು ಮಾಡುವ ಉದ್ದೇಶಕ್ಕಾಗಿ ಈ ಆದೇಶಕ್ಕೆ ಲಗತ್ತಿಸಿರುವ ಅನುಬಂಧದಲ್ಲಿ ಸೂಚಿಸಿರುವ ಪ್ರತಿ ತಾಲ್ಲೂಕಿಗೆ ಒಂದರಂತೆ ಸರ್ಕಾರವು ಈ ಕೆಳಕಂಡ ಸದಸ್ಯರನ್ನೊಳಗೊಂಡ ತಾಲ್ಲೂಕು ಮಟ್ಟದ ಸಮಿತಿ ರಚನೆ ಮಾಡಿದೆ.

| | | |
|---|---|---|
| 1. | ಅಧಿಕಾರೇತರ ಸದಸ್ಯರು | ಅಧ್ಯಕ್ಷರು |
| 2. | ತಹಶೀಲ್ದಾರರು | ಸದಸ್ಯರು |
| 3. | ಪರಿಶಿಷ್ಟ ಜಾತಿ: ಪರಿಶಿಷ್ಟ ಪಂಗಡಕ್ಕೆ ಸೇರಿದ ಒಬ್ಬ ಅಧಿಕಾರೇತರ ಸದಸ್ಯರು | ಸದಸ್ಯರು |
| 4. | ಹಿಂದುಳಿದ ವರ್ಗಕ್ಕೆ ಸೇರಿದ ಒಬ್ಬ ಅಧಿಕಾರೇತರ ಸದಸ್ಯರು | ಸದಸ್ಯರು |
| 5. | ಸಾಮಾನ್ಯ ವರ್ಗಕ್ಕೆ ಸೇರಿದ ಒಬ್ಬ ಅಧಿಕಾರೇತರ ಸದಸ್ಯರು | ಸದಸ್ಯರು |
| 6. | ವಲಯ ಅರಣ್ಯಾಧಿಕಾರಿ | ಸದಸ್ಯ ಕಾರ್ಯದರ್ಶಿ |

(ಮೇಲ್ಕಂಡ ಅಧಿಕಾರೇತರ ಸದಸ್ಯರ ಪೈಕಿ ಒಬ್ಬರು ಮಹಿಳೆಯಾಗಿರಬೇಕು).

ಸಮಿತಿಯು ಸಂಘಟಿಸಿದ 15 ದಿವಸಗಳೊಳಗೆ ಸಭೆ ಸೇರತಕ್ಕದ್ದು ಹಾಗೂ ವ್ಯಾಪಕ ಪ್ರಚಾರದ ಮೂಲಕ (ಸ್ಥಳೀಯ ಪತ್ರಿಕೆಗಳಲ್ಲಿ ಪ್ರಕಟಣೆ ನೀಡುವ ಮೂಲಕ) ದಿನಾಂಕ: 24-10-1980ರ ಪೂರ್ವದಲ್ಲಿ ಅರಣ್ಯ ಒತ್ತುವರಿ ಆಗಿರುವ ಆದರೆ ಅದನ್ನು ಸಾಬೀತುಪಡಿಸಲು ಯಾವುದೇ ದಾಖಲಾತಿಗಳನ್ನು ಒದಗಿಸಲು ಸಾಧ್ಯವಾಗದೇ ಇರುವಂತಹ ಒತ್ತುವರಿದಾರರಿಂದ ಅರ್ಜಿಗಳನ್ನು ಸಮಿತಿಯ ಸಭೆ ಸೇರಿದ ಒಂದು ತಿಂಗಳ ಒಳಗಾಗಿ ಪಡೆಯತಕ್ಕದ್ದು.

ಈ ರೀತಿ ಸ್ವೀಕಾರವಾದ ಅರ್ಜಿಗಳನ್ನು ಅತಿಕ್ರಮಣದಾರರ ಬಳಿ ಇರುವ ಸಾಂದರ್ಭಿಕ ಪುರಾವೆಯನ್ನು ಹಾಗೂ ಇತರೆ ಆಧಾರಗಳಿಂದ ಪರಿಶೀಲಿಸಿ ಅರ್ಹ ಪ್ರಕರಣಗಳನ್ನು ಸೂಕ್ತ ಶಿಫಾರಸ್ಸಿನೊಂದಿಗೆ ಅರ್ಜಿಗಳನ್ನು ಸ್ವೀಕರಿಸಿದ ಕೊನೆಯ ದಿನದಿಂದ ಮೂರು ತಿಂಗಳೊಳಗೆ ಸಂಬಂಧಪಟ್ಟ ಉಪ ಅರಣ್ಯ ಸಂರಕ್ಷಣಾಧಿಕಾರಿಯವರಿಗೆ ಕಳುಹಿಸತಕ್ಕದ್ದು.

ಉಪಅರಣ್ಯ ಸಂರಕ್ಷಣಾಧಿಕಾರಿಯವರು ತಮ್ಮ ಅಭಿಪ್ರಾಯದೊಂದಿಗೆ ಕೇಂದ್ರ ಸರ್ಕಾರದ ಅನುಮೋದನೆಯನ್ನು ಪಡೆಯಲು ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ ಅವರ ಮುಖಾಂತರ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಕಳುಹಿಸತಕ್ಕದ್ದು.

ಕೆಲವು ಪ್ರಕರಣಗಳಲ್ಲಿ ದಿನಾಂಕ: 24-10-1980ರ ಪೂರ್ವದಲ್ಲಿ ಕಂದಾಯ ಇಲಾಖೆಯಿಂದ ಭೂಮಂಜೂರಾತಿಯಾಗಿದ್ದು ಆದರೆ ವಾಸ್ತವಿಕವಾಗಿ ಜಮೀನು ಹೊಂದಿರುವವರ ಬಳಿ ಯಾವುದೇ ದಾಖಲಾತಿಗಳು ಇಲ್ಲದಿದ್ದಲ್ಲಿ ಅಂತಹ ಪ್ರಕರಣಗಳನ್ನು ಕಂದಾಯ ಇಲಾಖೆಯಿಂದ ದಾಖಲಾತಿಗಳನ್ನು ಪಡೆದು ಪರಿಶೀಲಿಸಿ ನಿರ್ಣಯ ಕೈಗೊಳ್ಳತಕ್ಕದ್ದು.

ಅಧಿಕಾರೇತರ ಅಧ್ಯಕ್ಷರನ್ನು ಮತ್ತು ಸದಸ್ಯರನ್ನು ಸಮಿತಿಗೆ ನಾಮ ನಿರ್ದೇಶನ ಮಾಡಲು ಪ್ರತ್ಯೇಕ ಆದೇಶ ಹೊರಡಿಸಲಾಗುವುದು.

ಈ ಸಮಿತಿಯ ಅಧಿಕಾರೇತರ ಅಧ್ಯಕ್ಷರು ಮತ್ತು ಸದಸ್ಯರು ದಿನಾಂಕ: 3-2-2001ರ ಸರ್ಕಾರ ಆದೇಶ ಎಫ್‌ಡಿ 2 ಎಸ್‌ಆರ್‌ಎ 2000 ರನ್ವಯ ಪ್ರಯಾಣ ಭತ್ಯೆ ಮತ್ತು ದಿನಭತ್ಯೆಗೆ ಅರ್ಹರಾಗಿರುತ್ತಾರೆ.

ಈ ಆದೇಶವನ್ನು ದಿನಾಂಕ: 27-11-2003ರಲ್ಲಿ ಆರ್ಥಿಕ ಇಲಾಖೆಯು ತನ್ನ ಟಿಪ್ಪಣಿ ಸಂಖ್ಯೆ: ಆಇ-1595 ವೆಚ್ಚ-2/ 2003 ರಲ್ಲಿ ನೀಡಿರುವ ಸಹಾನುಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ಆರ್. ವತ್ಸಲ**

ಸರ್ಕಾರದ ಅಧೀನ ಕಾರ್ಯದರ್ಶಿ, ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

## ಅನುಬಂಧ

| | | | | | | | |
|---|---|---|---|---|---|---|---|
| 1 | ಬೆಂಗಳೂರು ದಕ್ಷಿಣ | 35 | ಹರಪನಹಳ್ಳಿ | 69 | ಕಾರ್ಕಳ | 103 | ಸಿರ್ಸಿ |
| 2 | ಬೆಂಗಳೂರು ಉತ್ತರ | 36 | ಜಗಳೂರು | 70 | ಮಂಗಳೂರು | 104 | ಹಳಿಯಾಳ |
| 3 | ಆನೇಕಲ್ | 37 | ಶಿವಮೊಗ್ಗ | 71 | ಬಂಟ್ವಾಳ | 105 | ಯಲ್ಲಾಪುರ |
| 4 | ದೊಡ್ಡಬಳ್ಳಾಪುರ | 38 | ಭದ್ರಾವತಿ | 72 | ಪುತ್ತೂರು | 106 | ಭಟ್ಕಳ |
| 5 | ನೆಲಮಂಗಲ | 39 | ಶಿಕಾರಿಪುರ | 73 | ಸೂಳ್ಯ | 107 | ಹೊನ್ನಾವರ |
| 6 | ದೇವನಹಳ್ಳಿ | 40 | ಸಾಗರ | 74 | ಬೆಳ್ತಂಗಡಿ | 108 | ಅಂಕೋಲ |
| 7 | ರಾಮನಗರ | 41 | ಹೊಸನಗರ | 75 | ಬೆಳಗಾಂ | 109 | ಮುಂಡಗೋಡು |
| 8 | ಚನ್ನಪಟ್ಟಣ | 42 | ತೀರ್ಥಹಳ್ಳಿ | 76 | ಹುಕ್ಕೇರಿ | 110 | ಗುಲ್ಬರ್ಗ |
| 9 | ಕನಕಪುರ | 43 | ಸೊರಬ | 77 | ಖಾನಾಪುರ | 111 | ಆಳಂದ್ |
| 10 | ಮಾಗಡಿ | 44 | ಮೈಸೂರು | 78 | ಬೈಲಹೊಂಗಲ | 112 | ಸೇಡಮ್ |
| 11 | ಹೊಸಕೋಟೆ | 45 | ಹುಣಸೂರು | 79 | ಸವದತ್ತಿ | 113 | ಚಿತ್ತಾಪುರ |
| 12 | ಕೋಲಾರ | 46 | ಪಿರಿಯಾಪಟ್ಟಣ | 80 | ರಾಮದುರ್ಗ | 114 | ಚಿಂಚೋಳಿ |
| 13 | ಬಂಗಾರಪೇಟೆ | 47 | ಹೆಗ್ಗಡದೇವನಕೋಟೆ | 81 | ರಾಯಬಾಗ್ | 115 | ಯಾದಗಿರಿ |
| 14 | ಶ್ರೀನಿವಾಸಪುರ | 48 | ಚಾಮರಾಜನಗರ | 82 | ಗೋಕಾಕ್ | 116 | ಶಹಾಪುರ |
| 15 | ಮಾಲೂರು | 49 | ಕೊಳ್ಳೇಗಾಲ | 83 | ಬಿಜಾಪುರ | 117 | ಸೋರಾಪುರ |
| 16 | ಚಿಕ್ಕಬಳ್ಳಾಪುರ | 50 | ಗುಂಡ್ಲುಪೇಟೆ | 84 | ಬಾಗಲಕೋಟೆ | 118 | ರಾಯಚೂರು |
| 17 | ಶಿಡ್ಲಘಟ್ಟ | 51 | ಮಳವಳ್ಳಿ | 85 | ಜಮಖಂಡಿ | 119 | ದೇವದುರ್ಗ |
| 18 | ಬಾಗೇಪಲ್ಲಿ | 52 | ಹಾಸನ | 86 | ಮುದೋಳ | 120 | ಮಾನ್ವಿ |
| 19 | ಗುಬ್ಬಿ | 53 | ಅರಸಿಕೆರೆ | 87 | ಬಿಳಗಿ | 121 | ಲಿಂಗಸುಗೂರು |
| 20 | ಕುಣಿಗಲ್ | 54 | ಅರಕಲಗೂಡು | 88 | ಬಾದಾಮಿ | 122 | ಸಿಂಧನೂರು |
| 21 | ಮಧುಗಿರಿ | 55 | ಬೇಲೂರು | 89 | ಹುನಗುಂದ್ | 123 | ಗಂಗಾವತಿ |
| 22 | ಪಾವಗಡ | 56 | ಸಕಲೇಶಪುರ | 90 | ಧಾರವಾಡ | 124 | ಕುಷ್ಟಗಿ |
| 23 | ಶಿರಾ | 57 | ಚಿಕ್ಕಮಗಳೂರು | 91 | ಕಲಘಟಗಿ | 125 | ಬಳ್ಳಾರಿ |
| 24 | ಕೊರಟಗೆರೆ | 58 | ಕೊಪ್ಪ | 92 | ಹಾವೇರಿ | 126 | ಸಂಡೂರು |
| 25 | ಚಿಕ್ಕನಾಯಕನಹಳ್ಳಿ | 59 | ಕಡೂರು | 93 | ರಾಣಿಬೆನ್ನೂರು | 127 | ಹೊಸಪೇಟೆ |
| 26 | ತುರುವೇಕೆರೆ | 60 | ಮುದಿಗೆರೆ | 94 | ಹಿರೇಕೆರೂರು | 128 | ಹಡಗಲಿ |
| 27 | ಚಿತ್ರದುರ್ಗ | 61 | ನರಸಿಂಹರಾಜಪುರ | 95 | ಹಾನಗಲ್ | 129 | ಕೂಡ್ಲಗಿ |
| 28 | ಚಳ್ಳಕೆರೆ | 62 | ಶೃಂಗೇರಿ | 96 | ಗದಗ್ | 130 | ಬೀದರ್ |
| 29 | ಹಿರಿಯೂರು | 63 | ತರೀಕೆರೆ | 97 | ಶಿರಹಟ್ಟಿ | 131 | ಬಸವಕಲ್ಯಾಣ |
| 30 | ಹೊಳಲ್ಕೆರೆ | 64 | ಮಡಿಕೇರಿ | 98 | ಮುಂದರಗಿ | 132 | ಔರಾದ್ |
| 31 | ಹೊಸದುರ್ಗ | 65 | ಸೋಮವಾರಪೇಟೆ | 99 | ಕಾರವಾರ | 133 | ಹುಮ್ನಾಬಾದ್ |
| 32 | ದಾವಣಗೆರೆ | 66 | ವೀರಾಜಪೇಟೆ | 100 | ಜೋಯಿಡಾ | 134 | ಬಾಲ್ಕಿ |
| 33 | ಚನ್ನಗಿರಿ | 67 | ಉಡುಪಿ | 101 | ಕುಮುಟ | | |
| 34 | ಹೊನ್ನಾಳಿ | 68 | ಕುಂದಾಪುರ | 102 | ಸಿದ್ದಾಪುರ | | |

**ಎಸ್. ಆರ್. ವತ್ಸಲ**

ಪಿ. ಆರ್. 1520 ಸರ್ಕಾರದ ಅಧೀನ ಕಾರ್ಯದರ್ಶಿ, ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.